# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **137(147)** |
| ಮಾನ್ಯ ಸದಸ್ಯರ ಹೆಸರು | **ಘೋಟ್ನೆಕರ ಶ್ರೀಕಾಂತ ಲಕ್ಷಣ** |
| ಉತ್ತರಿಸಬೇಕಾದ ದಿನಾಂಕ | 21-09-2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 01. | ಕಾರವಾರ ಜಿಲ್ಲೆಯಲ್ಲಿ ಕರೋನಾ ಸೋಂಕಿತ ವ್ಯಕ್ತಿಯ ಮನೆಯ ಸುತ್ತ ಕಳೆದ 06 ತಿಂಗಳಿಂದ ಸೀಲ್ ಡೌನ್ ಪದ್ಧತಿ ಜಾರಿಯಲ್ಲಿರುವಾಗ ಸದರಿ ವಿಷಯದಲ್ಲಿ ಬಹಳಷ್ಟು ಅವ್ಯವಹಾರ ಆಗಿರುವುದಾಗಿ ಸಾರ್ವಜನಿಕರಿಂದ ತಿಳಿದು ಬಂದಿರುವುದ ಸರ್ಕಾರದ ಗಮನಕ್ಕೆ ಬಂದಿದೆಯೇ; ವಿವರ ನೀಡುವುದು. | ಬಂದಿಲ್ಲ. |
| 02. | ಸದರಿ ಸೀಲ್ ಡೌನ್ ಮಾಡಬೇಕಾದಾಗ ಇರುವ ಮಾನದಂಡವೇನು? (ಸವಿಸ್ತಾರ ವರದಿ ನೀಡುವುದು) | ಮಾರ್ಗಸೂಚಿಗಳನ್ನು ಅನುಬಂಧ "ಅ" ಲಗತ್ತಿಸಿದೆ. |
| 03. | ಜಿಲ್ಲೆಯಲ್ಲಿ ಕಳೆದ 06 ತಿಂಗಳಿಂದ ಎಷ್ಟು ಸೋಂಕಿತ ವ್ಯಕ್ತಿಯ ಮನೆಯ ಸುತ್ತ ಸೀಲ್ ಡೌನ್ ಮಾಡಿರುತ್ತಾರೆ, ಎಷ್ಟು ದಿನ ಬಳಸಿರುತ್ತಾರೆ; ಇದಕ್ಕೆ ತಗಲಿರುವ ವೆಚ್ಚ ಮತ್ತು ಬಡವಡೆ ಮಾಡಿದ ಅಧಿಕಾರಿಗಳು ಯಾರು? (ಬಿಡುಗಡೆ ಮಾಡಿದ ತಾಲ್ಲೂಕುವಾರು / ಜಿಲ್ಲಾವಾರು ಸವಿಸ್ತಾರ ಮಾಹಿತಿ ನೀಡುವುದು). | ವಿವರಗಳನ್ನು ಅನುಬಂಧ "ಆ" ಲಗತ್ತಿಸಿದೆ. |

ಆಕುಕ 237 ಸಮನ್ವಯ 2020

**(ಬಿ. ಶ್ರೀರಾಮುಲು)**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು

| ಕ್ರ.ಸಂ | ತಾಲ್ಲೂಕು | ಸೀಲ್ ಡೌನ್ ಮಾಡಲಾದ ಸೋಂಕಿತರ ಮನೆಗಳು | ಬಳಸಿದ ಸಾಮಗ್ರಿಗಳು | ತಗಲಿರುವ ವೆಚ್ಚ | ಹಣ ಬಿಡುಗಡೆ ಮಾಡಿದ ಅಧಿಕಾರಿ |
|---|---|---|---|---|---|
| 1. | ಕಾರವಾರ | 125 | ಬ್ಯಾರಿಕೇಡ್‌ಗಳು, ವಾರ್ನಿಂಗ್ ಟೇಪ್, ರಿಬ್ಬನ್, ಸ್ಟಿಕರ್ಸ್ ಇತ್ಯಾದಿ. | 0 | - |
| 2. | ಅಂಕೋಲಾ | 465 | ಬ್ಯಾರಿಕೇಡ್‌ಗಳು, ವಾರ್ನಿಂಗ್ ಟೇಪ್, ರಿಬ್ಬನ್, ಸ್ಟಿಕರ್ಸ್ ಇತ್ಯಾದಿ. | 0 | - |
| 3. | ಕುಮಟಾ | 824 | ಬ್ಯಾರಿಕೇಡ್‌ಗಳು, ವಾರ್ನಿಂಗ್ ಟೇಪ್, ರಿಬ್ಬನ್, ಸ್ಟಿಕರ್ಸ್ ಇತ್ಯಾದಿ. | 0 | - |
| 4. | ಹೊನ್ನಾವರ | 389 | ಬ್ಯಾರಿಕೇಡ್ಗಳು, ಪೋಸ್ಟರ್, ಶೀಲ್ ಇತ್ಯಾದಿ. | 22800/- | ತಹಶೀಲ್ದಾರ ಹೊನ್ನಾವರ |
| 5. | ಭಟ್ಕಳ | 980 | ಬ್ಯಾರಿಕೇಡ್, ಪೋಸ್ಟರ್, ಐಡಿ ಕಾರ್ಡ್, ಟೇಪ್ ಇತ್ಯಾದಿ. | 29816/- | ತಹಶೀಲ್ದಾರ ಭಟ್ಕಳ |
| 6. | ಶಿರಸಿ | 344 | ಬ್ಯಾರಿಕೇಡ್,ರಿಬ್ಬನ್ ಮತ್ತು ಟೇಪ್ ಇತ್ಯಾದಿ. | 9500/-<br>3,17,138/- | ಆಯುಕ್ತರು ನಗರ ಸಭೆ ಶಿರಸಿ<br>ಕಾರ್ಯನಿರ್ವಹಣಾಧಿಕಾರಿಗಳು, ತಾ.ಪಂ. ಶಿರಸಿ |
| 7. | ಸಿದ್ದಾಪುರ | 339 | ಬ್ಯಾರಿಕೇಡ್, ರಿಬ್ಬನ್ ಮತ್ತು ಟೇಪ್ ಇತ್ಯಾದಿ | 0 | - |
| 8. | ಯಲ್ಲಾಪುರ | 523 | ಬ್ಯಾರಿಕೇಡ್ , ರಿಬ್ಬನ್ ಮತ್ತು ಟೇಪ್ ಇತ್ಯಾದಿ | 0 | - |
| 9. | ಮುಂಡಗೋಡ | 572 | ಬ್ಯಾರಿಕೇಡ್ , ರಿಬ್ಬನ್ ಮತ್ತು ಟೇಪ್ ಇತ್ಯಾದಿ | 0 | - |
| 10. | ಹಳಿಯಾಳ | 262 | ಬ್ಯಾರಿಕೇಡ್, ಖಾತಿ ಬಂಡಲ್, ಕಟ್ಟಿಗೆ, ಬ್ಯಾಂಬೋ ಹಾಗೂ ವಾರ್ನಿಂಗ್ ಟೇಪ್ | 8685 | ಮುಖ್ಯಾಧಿಕಾರಿಗಳು ಪುರಸಭೆ ಹಳಿಯಾಳ |
| 11. | ಜೋಯಿಡಾ | 167 | ಬ್ಯಾರಿಕೇಡ್, ಖಾತಿ ಬಂಡಲ್, ಕಟ್ಟಿಗೆ, ಬ್ಯಾಂಬೋ ಹಾಗೂ ವಾರ್ನಿಂಗ್ ಟೇಪ್ | 0 | - |
| 12 | ದಾಂಡೇಲಿ | 1040 | ಬ್ಯಾರಿಕೇಡ್, ಖಾತಿ ಬಂಡಲ್, ಕಟ್ಟಿಗೆ, ಬ್ಯಾಂಬೋ ಹಾಗೂ ವಾರ್ನಿಂಗ್ ಟೇಪ್ | 0 | - |
| | ಒಟ್ಟು | 6030 | | 387939 | - |

- ಪ್ರತಿ ಸೀಲ್ ಡೌನ್ ಮಾಡಲಾದ ಪ್ರದೇಶಗಳಲ್ಲಿ ಕನಿಷ್ಠ 14 ದಿನ ಈ ಎಲ್ಲಾ ಸಾಮಾಗ್ರಿಗಳನ್ನು ಬಳಸಿರುತ್ತಾರೆ.

(15)



# ಕರ್ನಾಟಕ ಸರ್ಕಾರ

ಸಂಖ್ಯೆ:COM/HFW/PS/2020-21 ದಿನಾಂಕ-21-05-2020

## ಸುತ್ತೋಲೆ

**ವಿಷಯ:** ನಿಯಂತ್ರಣ ವಲಯ, ಕ್ಲಸ್ಟರ್ ಹಾಗೂ ಅವುಗಳ ವ್ಯಾಖ್ಯಾನ ಮತ್ತು ನಿರ್ವಹಣೆಯ ಬಗ್ಗೆ ಗುಣಮಟ್ಟ ಕಾರ್ಯನಿರ್ವಹಣಾ ಪ್ರಕ್ರಿಯೆ (ಎಸ್.ಓ.ಪಿ)

**ಉಲ್ಲೇಖ:** ಸುತ್ತೋಲೆ ಸಂಖ್ಯೆ HFW 100 ACS 2020 ದಿನಾಂಕ: 11.04.2020 ಮತ್ತು ಸಂಖ್ಯೆ: ಹೆಚ್.ಎಫ್‌ಡಬ್ಲ್ಯೂ 109 ಅಮುಕಾ 2020, ದಿನಾಂಕ 17/04/2020

*****

ಹಾಟ್-ಸ್ಪಾಟ್, ನಿಯಂತ್ರಣ ವಲಯ ಮತ್ತು ಕ್ಲಸ್ಟರ್ ಇದರ ವ್ಯಾಖ್ಯಾನಕ್ಕೆ ಸಂಬಂಧಿಸಿದಂತೆ ಮೇಲಿನ ಉಲ್ಲೇಖಿತ ಸುತ್ತೋಲೆಗಳಲ್ಲಿ ಈಗಾಗಲೇ ಗುಣಮಟ್ಟ ಕಾರ್ಯನಿರ್ವಹಣಾ ಪ್ರಕ್ರಿಯೆ (ಎಸ್.ಓ.ಪಿ) ಕುರಿತು ತಿಳಿಸಲಾಗಿರುತ್ತದೆ. ಈ ವಿಷಯದ ಬಗ್ಗೆ ತಜ್ಞರ ಸಮಿತಿಯೊಂದಿಗೆ ಕೂಲಂಕುಷವಾಗಿ ಪರಿಶೀಲಿಸಿ ಮಾರ್ಪಾಡಿತ ಮಾರ್ಗಸೂಚಿಯನ್ನು ಹೊರಡಿಸಲು ನಿರ್ಧರಿಸಲಾಗಿರುತ್ತದೆ. ಅದರಂತೆ ಈ ಹಿಂದಿನ ಮಾರ್ಗಸೂಚಿಯನ್ನು ಮಾರ್ಪಡಿಸಿ ಈ ಕೆಳಗಿನಂತೆ ಮಾರ್ಗಸೂಚಿಯನ್ನು ಹೊರಡಿಸಲಾಗಿರುತ್ತದೆ.

I. ಈ ಕೆಳಗಿನವು **ಪರಿಷ್ಕೃತ ವ್ಯಾಖ್ಯಾನ**ಗಳಾಗಿದ್ದು ಅವುಗಳ ನಿರ್ವಹಣೆಗೆ ವಿವರವಾದ ಕಾರ್ಯತಂತ್ರಗಳೂ ಒಳಗೊಂಡಿವೆ:

### 1. ನಿಯಂತ್ರಿತ ವಲಯ:

ನಿಯಂತ್ರಿತ ವಲಯ ಎಂದರೆ, ನೋವೆಲ್ ಕೊರೊನಾ ವೈರಸ್-ಪಾಸಿಟಿವ್ ವ್ಯಕ್ತಿಯ ನಿವಾಸ ಇರುವ ಸುತ್ತಲಿನ **"ಪ್ರದೇಶ"** –ಇಲ್ಲಿ ವೈರಲ್ ಸೋಂಕು ಹರಡದಂತೆ ಅತ್ಯಂತ ತೀವ್ರತರದ ಕ್ರಮಗಳನ್ನು ಜಾರಿಗೆ ತರಬೇಕಾದ ಅಗತ್ಯವಿರುತ್ತದೆ. ಈ "ಪ್ರದೇಶ"ವು ಎಲ್ಲಿಯವರೆಗೆ ನಿಯಂತ್ರಿತ ವಲಯವಾಗಿರುತ್ತದೆ ಎಂದರೆ;

i. ಒಂದು ಪ್ರದೇಶವನ್ನು ನಿಯಂತ್ರಿತ ವಲಯ ಎಂದು ಘೋಷಣೆ ಮಾಡಿದ 28 ದಿನಗಳ ಒಳಗೆ ಅಲ್ಲಿ ಯಾವುದೇ ಹೊಸ ಕೋವಿಡ್-19 ಪ್ರಕರಣ ವರದಿಯಾಗದೇ ಇದ್ದರೆ,

ii. ಅಥವಾ ಆ ನಿಯಂತ್ರಿತ ವಲಯದಲ್ಲಿ ಹತ್ತಕ್ಕಿಂತ ಕಡಿಮೆ ಸಂಪರ್ಕಗಳು ಹೋಮ್ ಕ್ವಾರಂಟೈನ್ ನಲ್ಲಿ ಸಕ್ರಿಯವಾಗಿದ್ದರೆ (ಈ ಹಿಂದೆ ವ್ಯಾಖ್ಯಾನ ಮಾಡಿದಂತೆ) ಆಗ ಆ ನಿಯಂತ್ರಿತ ವಲಯ ಸಾಮಾನ್ಯ ವಲಯವಾಗಿ ಮತ್ತು ಬಫರ್ ಝೋನ್ ಸಾಮಾನ್ಯ ವಲಯವಾಗಿ ಬದಲಾಗುತ್ತದೆ.

iii. "**ಪ್ರದೇಶ**" ಎಂದರೆ ಈ ಕೆಳಗಿನಂತೆ ವ್ಯಾಖ್ಯಾನಿಸಲಾಗಿದೆ:

ಎ) **ಅಪಾರ್ಟ್‌ಮೆಂಟ್ ಸಂಕೀರ್ಣಕ್ಕೆ**- ಕೋವಿಡ್-ಪಾಸಿಟಿವ್ ವ್ಯಕ್ತಿಯ ನಿವಾಸ ಇರುವ ನಿರ್ದಿಷ್ಟ ಟವರ್/ಬ್ಲಾಕ್. ಒಂದು ವೇಳೆ ಒಂದೇ ಬ್ಲಾಕ್ ಅಪಾರ್ಟಮೆಂಟ್ ಆಗಿದ್ದರೆ ಆಗ ಇಡೀ ಅಪಾರ್ಟಮೆಂಟ್.

**ಬಿ) ಪ್ರತ್ಯೇಕ ಮನೆ/ವಿಲ್ಲಾ**: ಕೋವಿಡ್-ಪಾಸಿಟಿವ್ ವ್ಯಕ್ತಿಯ ಮನೆ ಇರುವ ರಸ್ತೆಯನ್ನು ಒಳಗೊಂಡ/ಪ್ರಾಕೃತಿಕ ಪರಿಧಿಯ 200 ಮೀಟರ್ ಸುತ್ತಮುತ್ತಲಿನ ಪ್ರದೇಶ.

**ಸಿ) ಕೊಳಚೆ ಪ್ರದೇಶಕ್ಕೆ:** (ಅಧಿಸೂಚಿತ ಅಥವಾ ಅಲ್ಲದೆಯೂ)- ಕೋವಿಡ್-ಪಾಸಿಟಿವ್ ವ್ಯಕ್ತಿಯ ಮನೆ ಇರುವ ರಸ್ತೆಯನ್ನೂ ಒಳಗೊಂಡ/ಪ್ರಾಕೃತಿಕ ಪರಿಧಿಯ ಇಡೀ ಕೊಳಗೇರಿ.

**ಡಿ) ಗ್ರಾಮೀಣ ಪ್ರದೇಶಕ್ಕೆ:** ಕೋವಿಡ್-ಪಾಸಿಟಿವ್ ವ್ಯಕ್ತಿ ವಾಸವಿರುವ ಅಥವಾ ಹರಡಿರುವ ಸಣ್ಣ ಪ್ರದೇಶ –ಅಗತ್ಯಕ್ಕೆ ತಕ್ಕಂತೆ ಇಡೀ ವಾಸದ ಪ್ರದೇಶ.

iv. ಮೇಲೆ ವ್ಯಾಖ್ಯಾನ ಮಾಡಿದಂತೆ ರಸ್ತೆಗಳು, ಪಾರ್ಕ್ ಅಥವಾ ಇತರ ಸ್ವರೂಪಗಳನ್ನು ಬಿಬಿಎಂಪಿ ಆಯುಕ್ತರು/ಜಿಲ್ಲೆಯ ಜಿಲ್ಲಾಧಿಕಾರಿಯು "ಪ್ರದೇಶ" ಎಂದು ಗಡಿರೇಖೆ ವಿಧಿಸಲಿದ್ದಾರೆ.

v. ಹಿಂದಿನ ದಿನಾಂಕ: 17/04/2020ರ ಸುತ್ತೋಲೆಯಂತೆ ಅಧಿಸೂಚಿಸಿದ ನಿಯಂತ್ರಿತ ವಲಯಗಳ ಕ್ಷೇತ್ರವನ್ನು ಈ ಸುತ್ತೋಲೆಯಲ್ಲಿ ಮಿತಿಗೊಳಿಸಿರುವುದರಿಂದ ಬಿ.ಬಿ.ಎಂ.ಪಿ ಆಯುಕ್ತರು/ ಜಿಲ್ಲೆಯ ಜಿಲ್ಲಾಧಿಕಾರಿಗಳು ಪ್ರಸ್ತುತ ಸುತ್ತೋಲೆಯಂತೆ ನಿಯಂತ್ರಿತ ಪ್ರದೇಶವನ್ನು ಗುರುತಿಸಿ ಪರಿಷ್ಕೃತ ಅಧಿಸೂಚನೆ ಹೊರಡಿಸುವುದು.

**2. ಬಫರ್ ಝೋನ್:**

ಬಫರ್ ಝೋನ್ ಎಂದರೆ ನಿಯಂತ್ರಿತ ವಲಯದ ಸುತ್ತ ಇರುವ ನಗರ ಪ್ರದೇಶದಲ್ಲಿ 200 ಮೀಟರ್ ಮತ್ತು ಗ್ರಾಮೀಣ ಪ್ರದೇಶದಲ್ಲಿ ಒಂದು ಗ್ರಾಮದ ವ್ಯಾಪ್ತಿ. ಕೋವಿಡ್-19 ಸೋಂಕು ಹರಡದಂತೆ ತಡೆಯಲು ಬಫರ್ ಝೋನ್ ನಲ್ಲಿ ಸದಾ ಕಣ್ಗಾವಲು ಮತ್ತು ಸಾಮಾಜಿಕ ಅಂತರದ ಕ್ರಮಗಳು ಜಾರಿಯಲ್ಲಿರಬೇಕು.

ಕೋವಿಡ್ ಪಾಸಿಟಿವ್ ವ್ಯಕ್ತಿಯು ವಾಸವಿರುವ ಪೂರ್ಣ ಗ್ರಾಮವು ಗ್ರಾಮೀಣ ಪ್ರದೇಶದ ಬಫರ್ ಝೋನ್ ಆಗಿರುತ್ತದೆ.

ಈ ಬಫರ್ ಝೋನ್ ನಲ್ಲಿ ಸಾಮಾಜಿಕ ಅಂತರ ಸಕ್ರಿಯ ಸರ್ವೇಕ್ಷಣೆಯನ್ನು ನಿರ್ವಹಿಸಬೇಕಾಗಿರುತ್ತದೆ. ಅಲ್ಲದೇ ಪ್ರತಿದಿನ ಮನೆ-ಮನೆಗೆ ಭೇಟಿ ಮಾಡಿ ಸರ್ವೇಕ್ಷಣೆ ಕ್ರಮಗಳನ್ನು ಅನುಷ್ಠಾನಗೊಳಿಸಬೇಕಾಗಿರುತ್ತದೆ. ಈ ಕ್ರಮಗಳು ನಿಯಂತ್ರಣ ವಲಯದಲ್ಲಿ ಪ್ರತಿದಿನ ನಿರ್ವಹಿಸಬೇಕು ಹಾಗೂ ಬಫರ್ ಜೋನ್ ವಲಯದಲ್ಲಿ ವಾರದಲ್ಲಿ 2 ಸರಿ ಮಾಡಬೇಕಾಗಿರುತ್ತದೆ.

ಒಂದು ಪ್ರದೇಶವನ್ನು ನಿಯಂತ್ರಿತ ವಲಯ ಎಂದು ಘೋಷಣೆ ಮಾಡಿದ 28 ದಿನಗಳ ಒಳಗೆ ಅಲ್ಲಿ ಯಾವುದೇ ಹೊಸ ಕೋವಿಡ್-19 ಪ್ರಕರಣ ವರದಿಯಾಗದೇ ಇದ್ದರೆ, ಅಥವಾ ಆ ನಿಯಂತ್ರಿತ ವಲಯದಲ್ಲಿ ಹತ್ತಕ್ಕಿಂತ ಕಡಿಮೆ ಸಂಪರ್ಕಗಳು ಹೋಮ್ ಕ್ವಾರಂಟೈನ್ ನಲ್ಲಿ ಸಕ್ರಿಯವಾಗಿದ್ದರೆ (ಈ ಹಿಂದೆ ವ್ಯಾಖ್ಯಾನ ಮಾಡಿದಂತೆ) ಆಗ ಆ ನಿಯಂತ್ರಿತ ವಲಯ ಸಾಮಾನ್ಯ ವಲಯವಾಗಿ ಮತ್ತು ಬಫರ್ ಝೋನ್ ಸಾಮಾನ್ಯ ವಲಯವಾಗಿ ಬದಲಾಗುತ್ತದೆ.

**3. ಕ್ಲಸ್ಟರ್;**

ಒಂದು ಪ್ರದೇಶದಲ್ಲಿ ನಿರೀಕ್ಷೆಗಿಂತ ಹೆಚ್ಚಿನ ಕೋವಿಡ್ ಪಾಸಿಟಿವ್ ಪ್ರಕರಣಗಳು ಕಂಡುಬಂದಿದ್ದರೆ ಹಾಗೂ ಸಾಂಕ್ರಮಿಕವಾಗಿ ಸಂಬಂಧಪಟ್ಟಿದ್ದರೆ ಅಂತಹ ಪ್ರದೇಶ ಕ್ಲಸ್ಟರ್ ವ್ಯಾಪ್ತಿಗೆ ಒಳಪಡುತ್ತದೆ. ಇಲ್ಲಿನ ಪ್ರಕರಣಗಳು ಒಬ್ಬ ನಿರ್ದಿಷ್ಟ ಕೋವಿಡ್ ಪಾಸಿಟಿವ್ ವ್ಯಕ್ತಿಗೆ ಸಂಬಂಧಿಸಿದ್ದಾಗಿದ್ದು ಆ ಚಿಕ್ಕ ಪ್ರದೇಶದಲ್ಲಿ ಅಂತಹ ಅನೇಕ ಪ್ರಕರಣಗಳು ಕಂಡುಬರಬಹುದಾಗಿರುತ್ತದೆ.

## II. ಬಿಬಿಎಂಪಿ ಮತ್ತು ನಗರ ಪ್ರದೇಶಗಳಲ್ಲಿ ಪ್ರಮಾಣಿಕೃತ ನಿರ್ವಹಣಾ ವಿಧಾನ

### 1. ಘಟನಾ ನಿಯಂತ್ರಕ- ಬಿಕ್ಕಟ್ಟು ನಿರ್ವಹಣಾ ತಂಡ

ಒಮ್ಮೆ ಬಿಬಿಎಂಪಿ ಒಂದು ಪ್ರದೇಶವನ್ನು ನಿಯಂತ್ರಿತ ಪ್ರದೇಶ ಎಂದು ಘೋಷಣೆ ಮಾಡಿದ ಬಳಿಕ, ಪ್ರತಿಯೊಂದು ನಿಯಂತ್ರಿತ ವಲಯಕ್ಕೆ ಒಬ್ಬ ಎಕ್ಸಿಕ್ಯೂಟಿವ್

ಮ್ಯಾಜಿಸ್ಟ್ರೇಟ್ ಅಥವಾ ಒಂದನೇ ದರ್ಜೆಯ ಅಧಿಕಾರಿಗೆ ಮೆಜಿಸ್ಟೀರಿಯಲ್ ಅಧಿಕಾರಗಳನ್ನು ನೀಡಿ ಅವರನ್ನು ಘಟನಾ ನಿಯಂತ್ರಕ (ಕಮಾಂಡರ್)ನನ್ನಾಗಿ ಆಯುಕ್ತರು ನೇಮಕ ಮಾಡಬೇಕು. ಈ ಕಮಾಂಡರ್ ಬಫರ್ ವಲಯದ ಒಟ್ಟಾರೆ ನಿರ್ವಹಣೆಗೆ ಪೂರ್ಣ ಜವಾಬ್ದಾರನಾಗಿರುತ್ತಾನೆ. ಬಿಬಿಎಂಪಿ ಪ್ರದೇಶಗಳನ್ನು ಹೊರತುಪಡಿಸಿದ ಪ್ರಕರಣಗಳಲ್ಲಿ ಪ್ರತಿ ನಿಯಂತ್ರಿತ ವಲಯ ಮತ್ತು ಬಫರ್ ವಲಯಕ್ಕೆ ಜಿಲ್ಲಾಧಿಕಾರಿಯು ಘಟನಾ ನಿಯಂತ್ರಕನನ್ನು ಮೇಲಿನ ಕ್ರಮದಂತೆ ನೇಮಕ ಮಾಡಬೇಕಾಗುತ್ತದೆ. ನಿಯಂತ್ರಿತ ವಲಯಕ್ಕೆ ವಿನ್ಯಾಸಗೊಳಿಸಲಾದ ಎಸ್.ಒ.ಪಿ ಕ್ಲಸ್ಟರ್ ನಲ್ಲಿಯೂ ಜಾರಿಯಲ್ಲಿರುತ್ತದೆ.

ಬಿಬಿಎಂಪಿ ಪ್ರದೇಶದಲ್ಲಿ ಘಟನಾ ಕಮಾಂಡರ್ ಬಿಬಿಎಂಪಿಯ ಹಿರಿಯ ಅಥವಾ ಕಿರಿಯ ಪ್ರಥಮ ದರ್ಜೆ ಅಧಿಕಾರಿಯಾಗಿರಬೇಕು. ಆತನನ್ನು ಈ ಉದ್ದೇಶಕ್ಕಾಗಿ ಮೆಜಿಸ್ಟೀರಿಯಲ್ ಅಧಿಕಾರವನ್ನು ನೀಡಿ ವಿಶೇಷವಾಗಿ ನೇಮಕ ಮಾಡಿರಬೇಕು. ಬಿಬಿಎಂಪಿಯೇತರ ಪ್ರದೇಶಗಳಲ್ಲಿ ಜಿಲ್ಲಾಧಿಕಾರಿಯು ಒಂದು ಅಥವಾ ಅದಕ್ಕಿಂತ ಹೆಚ್ಚಿನ ನಿಯಂತ್ರಿತ ವಲಯಕ್ಕೆ ತಾಲೂಕು/ಜಿಲ್ಲಾ ಮಟ್ಟದ ಅಧಿಕಾರಿಯನ್ನು ಘಟನಾ ಕಮಾಂಡರ್ (ನಿಯಂತ್ರಕ) ಆಗಿ ನೇಮಕ ಮಾಡಬಹುದು.

ನಿಯಂತ್ರಿತ ವಲಯದ ನಿರ್ವಹಣೆಗೆ ಸಂಬಂಧಿಸಿದಂತೆ ಬಿಬಿಎಂಪಿ ಆಯುಕ್ತ/ ಆಯಾ ಜಿಲ್ಲಾಧಿಕಾರಿ ಮಾರ್ಗದರ್ಶನದಲ್ಲಿ ಗಡಿಗಳ ನಿಗದಿಯೂ ಸೇರಿದಂತೆ ಎಲ್ಲಾ ತೀರ್ಮಾನಗಳನ್ನು ಕೈಗೊಳ್ಳುವ ಜವಾಬ್ದಾರಿ ಘಟನಾ ಕಂಮಾಂಡರ್ ಅವರದಾಗಿರುತ್ತದೆ. ನಿರ್ದಿಷ್ಟವಾದ ವ್ಯಾಪ್ತಿಯ ಗುರುತಿಸಿರುವುದನ್ನು ಒಳಗೊಂಡಿರುತ್ತದೆ. ಸರ್ಕಾರದ ನಿರ್ದೇಶನಗಳಿಗೆ ಅನುಗುಣವಾಗಿ ದಿನನಿತ್ಯದ ನಿರ್ವಹಣೆ ಘಟನಾ ಕಮಾಂಡರ್ ಹೊಣೆಗಾರಿಕೆಯಾಗಿರುತ್ತದೆ. ನಿಯಂತ್ರಿತ ವಲಯದ ಗಡಿಗಳನ್ನು ಸ್ಪಷ್ಟವಾಗಿ ನಮೂದಿಸಬೇಕು ಹಾಗೂ ಪ್ರವೇಶ ಮತ್ತು ನಿರ್ಗಮನ ಪಾಯಿಂಟ್ ಗಳನ್ನು ಗುರುತಿಸಬೇಕು.

ನಿಯಂತ್ರಿತ ವಲಯದ ಕಣ್ಣಳತೆ ದೂರದಲ್ಲಿ ಘಟನಾ ಕಮಾಂಡ್ ಕೇಂದ್ರವನ್ನು ಸ್ಥಾಪಿಸಿ ಘಟನಾ ಕಮಾಂಡರ್ ಅಲ್ಲಿಂದಲೇ ಕಾರ್ಯನಿರ್ವಹಿಸಬೇಕು. ಘಟನಾ ಕಮಾಂಡರ್ ಕೇಂದ್ರ ಕೇಂದ್ರೀಕೃತ ನಿಯಂತ್ರಣ ಕೊಠಡಿಯನ್ನು ಹೊಂದಿದ್ದು ಆ ನಿಯಂತ್ರಣ ಕೊಠಡಿಗೆ ನಿಯೋಜಿಸಲ್ಪಟ್ಟಿರುವ ಪೊಲೀಸ್, ನಗರಸಭೆ ಮತ್ತು ಆರೋಗ್ಯ ಇಲಾಖೆ ಪ್ರತಿನಿಧಿಗಳ ನೆರವಿನೊಂದಿಗೆ ಘಟನಾ ಕಮಾಂಡರ್ ಮೇಲ್ವಿಚಾರಣೆಯಲ್ಲಿ ಕಾರ್ಯನಿರ್ವಹಿಸುತ್ತದೆ. ಅದು ದಿನದ 24 ತಾಸು ಕಾರ್ಯನಿರತವಾಗಿದ್ದು ಅದರಲ್ಲಿರುವ ಸಿಬ್ಬಂದಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒಳಗೊಂಡಿರುತ್ತದೆ. ಈ ಕಮಾಂಡ್ ಕೇಂದ್ರದ ಸುಗಮ ಕಾರ್ಯನಿರ್ವಹಣೆಗೆ ಅಗತ್ಯವಾದ ಎಲ್ಲ ಸೌಕರ್ಯಗಳನ್ನು ಬಿಬಿಎಂಪಿ/ನಗರಸಭೆ ಒದಗಿಸಬೇಕು.

ನಿಯಂತ್ರಿತ ವಲಯದಲ್ಲಿ ನಿಯಂತ್ರಣ ನಿಯಮ ಜಾರಿಗೆ ವಿಶೇಷ ತಂಡಗಳನ್ನು ರಚಿಸಬೇಕು. ಘಟನಾ ಕಮಾಂಡರ್ ನಿಯಂತ್ರಿತ ವಲಯದಲ್ಲಿ ಲಾಕ್-ಡೌನ್ ಜಾರಿಗೊಳಿಸಲು ಸಂಚಾರಿ ತಂಡಗಳನ್ನು ಆಯಾ ವ್ಯಾಪ್ತಿಯಲ್ಲಿ ನಿಯೋಜಿಸಬೇಕು. ನಿಯಂತ್ರಿತ ವಲಯದಲ್ಲಿ ವಾಸಿಸುವ ಜನರ ವಿಶೇಷ ಅವಶ್ಯಕತೆಗಳನ್ನು (ಗರ್ಭಿಣಿಯರು, ಹೃದ್ರೋಗಿಗಳು, ಇತ್ಯಾದಿ) ಅಂದಾಜು ಮಾಡಿ ಅಂತಹವರಿಗೆ ತುರ್ತು ಸಂದರ್ಭಗಳಲ್ಲಿ ನೆರವು ಒದಗಿಸಲು ಸ್ಥಳೀಯ ಸಂಘಗಳ ಸಹಕಾರದೊಂದಿಗೆ ಸೂಕ್ತ ಏರ್ಪಾಡುಗಳನ್ನು ಮಾಡಿಕೊಳ್ಳಬೇಕು. ಆಯಾ ಬಿಬಿಎಂಪಿ ವಲಯದ ಜಂಟಿ ಆಯುಕ್ತರು/ ನಗರಸಭೆಯ ಚೀಫ್ ಆಫೀಸರ್ ಘಟನಾ ಕಮಾಂಡರ್ ಗೆ

ಅವನ/ಅವಳ ಕರ್ತವ್ಯಗಳನ್ನು ಸಮರ್ಪಕವಾಗಿ ನಿಭಾಯಿಸಲು ಸಕಲ ನೆರವು ನೀಡಬೇಕು ಹಾಗೂ ಅಗತ್ಯ ಸಿಬ್ಬಂದಿ ಒದಗಿಸಬೇಕು.

**2. ಸಂಪೂರ್ಣ ಸೀಲ್ ಡೌನ್- ಪೊಲೀಸರ ಪಾತ್ರ**

ನಿಯಂತ್ರಿತ ವಲಯವನ್ನು ಎಲ್ಲಾ ಪ್ರವೇಶ ದ್ವಾರಗಳಲ್ಲೂ ಶಾಶ್ವತವಾಗಿ ತಡೆಗೋಡೆ ಹಾಕುವ ಮೂಲಕ ಪೊಲೀಸರು ನಾಕಾಬಂದಿ ಮಾಡಬೇಕು. ನಿಯಂತ್ರಿತ ಪ್ರದೇಶದಲ್ಲಿ ಯಾವುದೇ ವ್ಯಕ್ತಿ ಯಾವುದೇ ರೀತಿಯ ಉದ್ದೇಶಗಳಿಗೆ ಮನೆಗಳಿಂದ ಹೊರಗೆ ಬರಲು ಅವಕಾಶ ನೀಡಲಾಗುವುದಿಲ್ಲ. ಪ್ರತಿಯೊಂದು ನಿಯಂತ್ರಿತ ಒಂದೇ ಒಂದು ಪ್ರವೇಶ ಮತ್ತು ನಿರ್ಗಮನ ದ್ವಾರವಿರಬೇಕು. ನಿಯಂತ್ರಿತ ವಲಯದ ಒಳಗೆ ಮತ್ತು ಹೊರಗೆ ಯಾವುದೇ ಖಾಸಗಿ ವಾಹನ ಸಂಚಾರಕ್ಕೆ ಅವಕಾಶ ನೀಡಬಾರದು. ಇಡೀ ಪ್ರದೇಶ ಸಂಪೂರ್ಣವಾಗಿ ಸೀಲ್ ಆಗಿರುವಂತೆ ನೋಡಿಕೊಳ್ಳುವ ಜವಾಬ್ದಾರಿ ಪೊಲೀಸ್ ಸಿಬ್ಬಂದಿಯದಾಗಿರುತ್ತದೆ.

ಅಷ್ಟೇ ಅಲ್ಲದೆ, ಪೊಲೀಸರು ಕರ್ಫ್ಯೂ ನಿರ್ವಹಣೆಯ ಹೊಣೆಗಾರಿಕೆಯನ್ನೂ ಪೊಲೀಸರು ನಿರ್ವಹಿಸಬೇಕು. ಅಗತ್ಯ ಸೇವೆಗಳು ಮತ್ತು ವೈದ್ಯಕೀಯ ತುರ್ತು ಸಂದರ್ಭಗಳಿಗೆ ಪೊಲೀಸರು ಎಮರ್ಜೆನ್ಸಿ ಪಾಸ್ ಗಳನ್ನು ವಿತರಿಸುವ ಮೂಲಕ ಅವಕಾಶ ನೀಡಬೇಕು. ಸೀಲ್ ಡೌನ್ ಜಾರಿಗೆ ತಂತ್ರಜ್ಞಾನವನ್ನು ಬಳಸಿಕೊಳ್ಳಬೇಕು. ನಿಯಂತ್ರಿತ ವಲಯದಲ್ಲಿ ಸಂಪೂರ್ಣ ಲಾಕ್ ಡೌನ್ ಖಾತರಿಪಡಿಸಲು ಡ್ರೋನ್ ಗಳನ್ನು ಪರಿಣಾಮಕಾರಿಯಾಗಿ ಬಳಸಬೇಕು.

**3. ಆರೋಗ್ಯ ಇಲಾಖೆ ಜವಾಬ್ದಾರಿಗಳು**

ರಾಜ್ಯ ಆರೋಗ್ಯ ಇಲಾಖೆ ಮತ್ತು ನಗರಾಡಳಿತ ಆರೋಗ್ಯಾಧಿಕಾರಿಗಳು ಜಂಟಿಯಾಗಿ ಮೇಲ್ವಿಚಾರಣೆ ಮತ್ತು ಪ್ರತಿಬಂಧಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕು. ಅಂತಹ ವಲಯದಲ್ಲಿ ಆರೋಗ್ಯ ಔಟ್-ಪೋಸ್ಟ್ ಆರಂಭಿಸಿ ಒರ್ವ ವೈದ್ಯ ಹಾಗೂ ಸತತ ಐಇಸಿ ಪ್ರಚಾರದ ಜೊತೆಗೆ ದಿನಕ್ಕೆ ಒಂದು ಬಾರಿ ಜನಸಂಪರ್ಕಗಳ ಪತ್ತೆ ಕಾರ್ಯಕ್ಕೆ ಅಗತ್ಯ ಸಂಖ್ಯೆಯ ಕ್ಷೇತ್ರ ಸಿಬ್ಬಂದಿಯನ್ನು ನಿಯೋಜಿಸಬೇಕು.

ಜನಸಂಪರ್ಕ ನಿಗಾ ಮತ್ತು ಪತ್ತೆ ಕಾರ್ಯವನ್ನು ಶಿಷ್ಟಾಚಾರದ ನಿಯಮಗಳ ಪ್ರಕಾರ ನಡೆಸಬೇಕು. ಕೋವಿಡ್ ಪಾಸಿಟಿವ್ ಸಂಪರ್ಕ ವ್ಯಕ್ತಿಗಳಿಗೆ ತಕ್ಷಣವೆ ಸ್ಟ್ಯಾಂಪಿಂಗ್ ಮಾಡಬೇಕು ಮತ್ತು ಮನೆಯ ಮುಂಭಾಗ ನೋಟಿಸ್ ಅಂಟಿಸಿ ಸಂಬಂಧಿಸಿದ ಮಾಹಿತಿಯನ್ನು ಅಂತರ್ಜಾಲದಲ್ಲಿ ಪ್ರಚುರಪಡಿಸಬೇಕು. ಕಡಿಮೆ ರಿಸ್ಕ್ (ಪ್ರಾಥಮಿಕ) ಸಂಪರ್ಕದ ವ್ಯಕ್ತಿಗಳನ್ನು ತಕ್ಷಣವೇ ಸಾಂಸ್ಥಿಕ ದಿಗ್ಬಂಧನ ಕೇಂದ್ರಕ್ಕೆ ರವಾನಿಸುವ ಹಾಗೂ ಕಡಿಮೆ ರಿಸ್ಕ್ (ದ್ವಿತೀಯ) ಸಂಪರ್ಕದ ವ್ಯಕ್ತಿಗಳನ್ನು ಹೋಮ್ ಕ್ವಾರಂಟೈನ್ ಗೆ ಒಳಪಡಿಸಬೇಕು.

ಕೊಳಗೇರಿ ಪ್ರದೇಶಗಳಲ್ಲಿ ಸ್ವಾಭಾವದ ಕಾರಣ ಕಡಿಮೆ ರಿಸ್ಕ್ ವ್ಯಕ್ತಿಗಳೂ ಹೋಮ್ ಕ್ವಾರಂಟೈನ್ ಪರಿಣಾಮಕಾರಿಯಾಗಿ ಪಾಲಿಸಲು ಸಾಧ್ಯವಾಗದೆಂಬ ವಾಸ್ತವಾಂಶ ಸರ್ವವಿದಿತ. ಆದ್ದರಿಂದ ಅಂತಹ ವ್ಯಕ್ತಿಗಳನ್ನು ಕೊಳಗೇರಿಗಳ ಸಾಂಸ್ಥಿಕ ಕ್ವಾರಂಟೈನ್ ಕೇಂದ್ರಗಳಿಗೆ ಸ್ಥಳಾಂತರಿಸಬೇಕು.

ಇನ್-ಫ್ಲೂಯೆನ್ಜಾದಂತಹ ಸೋಂಕುಗಳ (ಐ.ಎಲ್.ಐ) ಪತ್ತೆಗೆ ಇಡೀ ಜನಸಂಖ್ಯೆಯ ಆರೋಗ್ಯ ಮಾಹಿತಿ ಅಥವಾ ಅತಿತೀವ್ರ ಉಸಿರಾಟದ ತೊಂದರೆ (ಎಸ್.ಎ.ಆರ್) ಪ್ರಕರಣಗಳು ಅಥವಾ ಕೋವಿಡ್-19ನ್ನು ಹೋಲುವ ಯಾವುದೇ ರೋಗ ಲಕ್ಷಣಗಳನ್ನು ಗಮನಿಸಿ ಅಂತಹವರಿಗೆ ಆದ್ಯತೆಯ ಮೇರೆಗೆ ಚಿಕಿತ್ಸೆ ಒದಗಿಸಬೇಕು. ಅಂತಹ ಪ್ರದೇಶದಲ್ಲಿ ಅತ್ಯಂತ

ಕಟ್ಟುನಿಟ್ಟಿನ ಸಾಮಾಜಿಕ ಅಂತರ ಕಾಯ್ದುಕೊಳ್ಳುವಂತೆ ಘಟನಾ ಕಮಾಂಡರ್ ಮಾರ್ಗದರ್ಶನದಲ್ಲಿ ಈ ತಂಡ ಪ್ರಚಾರ ಮಾಡುತ್ತಿರಬೇಕು. ಆರೋಗ್ಯ ಇಲಾಖೆ ಮಾಸ್ಕ್ ಗಳು ಹಾಗೂ ಇತರೆ ಸಾಮಗ್ರಿಗಳನ್ನು ಒದಗಿಸುವ ಮೂಲಕ ಗೃಹ ದಿಗ್ಬಂಧನ ಮತ್ತು ಸಾಮಾಜಿಕ ಅಂತರ ಕ್ರಮಗಳ ಪಾಲನೆಗೆ ನೆರವಾಗಬೇಕು.

ಆರೋಗ್ಯ ಸಂಬಂಧಿ ಚಟುವಟಿಕೆಗಳನ್ನು ಘಟನಾ ನಿಯಂತ್ರಕನ ಒಟ್ಟಾರೆ ಮೇಲ್ವಿಚಾರಣೆಯಲ್ಲಿ ಕೈಗೊಳ್ಳಲಾಗುತ್ತದೆ.

**4. ನಗರಸಭೆ ಅಧಿಕಾರಿಗಳ ಜವಾಬ್ದಾರಿ;**

ನಿಯಂತ್ರಿತ ವಲಯದಲ್ಲಿ ಒಟ್ಟಾರೆಯಾಗಿ ನೈರ್ಮಲೀಕರಣದ ನಿರ್ವಹಣೆ ಮಾಡುವುದು ಬಿಬಿಎಂಪಿ/ನಗರಸಭೆ ಅಧಿಕಾರಿಗಳ ಜವಾಬ್ದಾರಿಯಾಗಿರುತ್ತದೆ. ನಿಯಂತ್ರಿತ ವಲಯದಲ್ಲಿ ಪ್ರತಿದಿನವೂ ಘನತ್ಯಾಜ್ಯ ನಿರ್ವಹಣೆ (ಬಯೋ ಮೆಡಿಕಲ್ ತ್ಯಾಜ್ಯ ಸೇರಿದಂತೆ) ಮತ್ತು ಸೋಂಕು ನಿವಾರಣೆ ಸ್ಪ್ರೇ ಮಾಡುವ ಕೆಲಸವನ್ನು ನಿರ್ವಹಿಸತಕ್ಕದ್ದು. ಕುಡಿಯುವ ನೀರಿನ ಕೊರತೆ ಕಂಡುಬಂದರೆ ಅದನ್ನು ಸರಿದೂಗಿಸಲು ಕ್ರಮ ಕೈಗೊಳ್ಳಬೇಕು. ಅಗತ್ಯವೆನಿಸಿದರೆ ಪ್ರತಿ ಮನೆಗಳಿಗೆ ನೀರನ್ನು ಸರಬರಾಜು ಮಾಡುವ ಕೆಲಸವನ್ನೂ ಮಾಡಬೇಕು. ಅಗತ್ಯಕ್ಕೆ ತಕ್ಕಂತೆ ಬಿಬಿಎಂಪಿ/ನಗರಸಭೆ ಅಧಿಕಾರಿಗಳು ಆಹಾರ ಪೊಟ್ಟಣಗಳು ಮತ್ತು ಪಡಿತರವನ್ನು ಒದಗಿಸಬೇಕು. ಈ ಮೇಲೆ ಪ್ರಸ್ತಾಪ ಮಾಡಿದ ಕೆಲಸಗಳನ್ನು ನಿರ್ವಹಿಸಲು ಹಾಟ್-ಸ್ಪಾಟ್ ವಲಯಗಳಲ್ಲಿ ಸರ್ಕಾರಿ ಗುರುತಿನ ಪತ್ರಗಳನ್ನು ಹೊಂದಿದ ಎಲ್ಲ ನಗರಸಭೆ ಸಿಬ್ಬಂದಿಗೆ ಅನುಮತಿ ನೀಡಬೇಕು.

**5. ಅಗತ್ಯವಸ್ತು ಪೂರೈಕೆ ನಿರ್ವಹಣೆ**

ನಿಯಂತ್ರಿತ ವಲಯವನ್ನು ಸಂಪೂರ್ಣ ಸೀಲ್ ಡೌನ್ ಮಾಡುವುದರಿಂದ, ಈ ಪ್ರದೇಶಗಳ ವ್ಯಾಪ್ತಿಯ ಜನ ಮನೆಗಳಿಂದ ಯಾವ ಕಾರಣಕ್ಕೂ ಹೊರಗೆ ಬರುವಂತಿಲ್ಲ. ಹಾಗಾಗಿ ಜನರಿಗೆ ಮೂಲಭೂತ ಅಗತ್ಯಗಳಾದ ದಿನಸಿ ಪದಾರ್ಥಗಳು, ಮಾಂಸ, ಹಾಲು, ಎಲ್ ಪಿಜಿ ಅನಿಲ ಮತ್ತು ಔಷಧಗಳನ್ನು ಪೂರೈಸುವವರಿಗೆ ಕೂಡ ಪೊಲೀಸರು ಪ್ರವೇಶಾತಿ ಮತ್ತು ನಿರ್ಗಮನ ಪಾಸ್ ಗಳನ್ನು ಕೊಡಬೇಕಾಗುತ್ತದೆ. ಆಯಾ ವ್ಯಾಪ್ತಿಯ ಸ್ಥಳೀಯ ಪೊಲೀಸ್ ಠಾಣೆಗಳು ಈ ಸಂಬಂಧ ತುರ್ತು ಪಾಸ್ ಗಳನ್ನು ಕೊಡಬೇಕು. ಹೀಗೆ ಮಾಡುವ ಮೂಲಕ, ಅತ್ಯಗತ್ಯ ವಸ್ತುಗಳು ಮತ್ತು ಸೇವೆಗಳ ಲಭ್ಯತೆಗೆ ಆ ವ್ಯಾಪ್ತಿಯಲ್ಲಿ ತೊಂದರೆಯಾಗದಂತೆ ನಿಗಾ ವಹಿಸಬೇಕು. ನಿಯಂತ್ರಿತ ವಲಯಗಳ ದಿನಸಿ ಅಂಗಡಿಗಳು, ಮಾಂಸ, ಹಾಲು, ಔಷಧಗಳು, ಎಲ್.ಪಿ.ಜಿ ಅಂಗಡಿಗಳು ಕೂಡ ಮುಚ್ಚಿರುತ್ತವೆ. ಇಂತಹ ಪ್ರದೇಶದಲ್ಲಿರುವ ಪಡಿತರ ಚೀಟಿ ಹೊಂದಿರುವವರಿಗೆ ನ್ಯಾಯಬೆಲೆ ಅಂಗಡಿಗಳು ಪಡಿತರವನ್ನು ಮನೆ ಬಾಗಿಲಿಗೆ ತಲುಪಿಸಲು ಕ್ರಮ ಕೈಗೊಳ್ಳಬೇಕು.

**III. ಗ್ರಾಮೀಣ ಪ್ರದೇಶಗಳಲ್ಲಿ ಪ್ರಮಾಣೀಕೃತ ನಿರ್ವಹಣಾ ವಿಧಾನ**

**1. ಘಟನಾ ಕಮಾಂಡರ್- ಬಿಕ್ಕಟ್ಟು ನಿರ್ವಹಣಾ ತಂಡ**

ಜಿಲ್ಲಾಧಿಕಾರಿಯವರು ಯಾವುದೇ ಪ್ರದೇಶವನ್ನು ನಿಯಂತ್ರಿತ ವಲಯ ಎಂದು ಘೋಷಣೆ ಮಾಡಿದ ತಕ್ಷಣ, ಅಂತಹ ಪ್ರತಿ ನಿಯಂತ್ರಿತ ವಲಯಕ್ಕೆ ಒಬ್ಬ ಎಕ್ಸಿಕ್ಯೂಟಿವ್ ಮ್ಯಾಜಿಸ್ಟ್ರೇಟ್

ಅವರನ್ನು ಘಟನಾ ಕಮಾಂಡರ್ ಆಗಿ ನೇಮಕ ಮಾಡುತ್ತಾರೆ. ನಿಯಂತ್ರಿತ ವಲಯದ ಹಾಗೂ ಅದನ್ನು ಸುತ್ತುವರಿದ ಮೀಸಲು ಪ್ರದೇಶದ ನಿರ್ವಹಣೆ ಮಾಡುವುದು ಇದರ ಉದ್ದೇಶವಾಗಿರುತ್ತದೆ. ನಿಯಂತ್ರಿತ ವಲಯದ ಸರಹದ್ದನ್ನು ಸ್ಪಷ್ಟವಾಗಿ ಗುರುತಿಸಬೇಕು. ನಿಯಂತ್ರಿತ ವಲಯದ ಪ್ರದೇಶದೊಳಕ್ಕೆ ಪ್ರವೇಶ ಕಲ್ಪಿಸುವ ಪ್ರಮುಖ ಸ್ಥಳಗಳು ಹಾಗೂ ಅಲ್ಲಿಂದ ಹೊರಹೋಗಲು ಇರುವ ಪ್ರಮುಖ ಸ್ಥಳಗಳನ್ನು ಗುರುತಿಸಬೇಕಾಗುತ್ತದೆ. ಒಂದೊಮ್ಮೆ ಗ್ರಾಮವು ನಿಯಂತ್ರಿತ ವಲಯವಾಗಿದ್ದರೆ, ಇಡೀ ಆ ನಿವಾಸದ ವ್ಯಾಪ್ತಿಯನ್ನು ಅಥವಾ ಸೂಕ್ತವೆನ್ನಿಸುವ ನಿರ್ಧಾರದ ಪ್ರಕಾರ ಅದಕ್ಕೆ ಹೊಂದಿಕೊಂಡ ಒಂದಷ್ಟು ಪ್ರದೇಶವನ್ನು ಬಿಗಿ ವ್ಯವಸ್ಥೆಯೊಂದಿಗೆ ಸುತ್ತುವರಿಯಬೇಕಾಗುತ್ತದೆ.

ನಿಯಂತ್ರಿತ ವಲಯದ ನಿರ್ವಹಣೆಗೆ ಸಂಬಂಧಿಸಿದ ಎಲ್ಲಾ ನಿರ್ಧಾರಗಳು ಘಟನಾ ಕಮಾಂಡರ್ ಅವರ ಜವಾಬ್ದಾರಿಯಾಗಿರುತ್ತದೆ. ಆಯಾ ಜಿಲ್ಲಾಧಿಕಾರಿಯವರ ಮಾರ್ಗದರ್ಶನದಲ್ಲಿ ನಿಯಂತ್ರಿತ ವಲಯದ ಸರಹದ್ದು ನಿರ್ಧರಿಸುವ ಹೊಣೆಗಾರಿಕೆ ಕೂಡ ಇವರದ್ದೇ ಆಗಿರುತ್ತದೆ. ಜಿಲ್ಲಾಧಿಕಾರಿಯವರ ನಿರ್ದೇಶನಕ್ಕೆ ಒಳಪಟ್ಟಂತೆ, ಇಂತಹ ಪ್ರದೇಶದ ದಿನವಹಿ ನಿರ್ವಹಣೆ ಕೂಡ ಘಟನಾ ಕಮಾಂಡರ್ ಅವರ ಅಧಿಕಾರಕ್ಕೆ ಒಳಪಟ್ಟಿರುತ್ತದೆ. ಮೊದಲೇ ಹೇಳಿದಂತೆ, ನಿಯಂತ್ರಿತ ವಲಯದ ಗಡಿಯನ್ನು ಸ್ಪಷ್ಟವಾಗಿ ಗುರುತಿಸಬೇಕಾಗುತ್ತದೆ. ಜೊತೆಗೆ, ನಿಯಂತ್ರಿತ ವಲಯಕ್ಕೆ ಸಂಪರ್ಕ ಕಲ್ಪಿಸುವ ಪ್ರಮುಖ ಸ್ಥಳಗಳು ಹಾಗೂ ಅಲ್ಲಿಂದ ಹೊರ ಊರುಗಳಿಗೆ ಸಂಪರ್ಕ ಕಲ್ಪಿಸುವ ಸ್ಥಳಗಳನ್ನು ಗುರುತಿಸುವುದು ಅಗತ್ಯವಾಗಿರುತ್ತದೆ.

ನಿಯಂತ್ರಿತ ವಲಯ ಎಂದು ಘೋಷಿತವಾದ ಪ್ರದೇಶಕ್ಕೆ ಹತ್ತಿರದ ಸ್ಥಳದಲ್ಲಿ ಘಟನಾ ನಿಯಂತ್ರಣ ಕೇಂದ್ರವನ್ನು ಸ್ಥಾಪಿಸಬೇಕಾಗುತ್ತದೆ. ಘಟನಾ ಕಮಾಂಡರ್ ಆಗಿ ನೇಮಕಗೊಂಡವರು ಈ ಕೇಂದ್ರಗಳಿಂದ ಕಾರ್ಯನಿರ್ವಹಿಸಲಿದ್ದಾರೆ. ಈ ಕೇಂದ್ರವು ಒಂದು ಕೇಂದ್ರೀಕೃತ ನಿಯಂತ್ರಣ ಕೊಠಡಿಯನ್ನು ಹೊಂದಿರುತ್ತದೆ. ಘಟನಾ ಕಮಾಂಡರ್ ಅವರೇ ಇದರ ಮೇಲ್ವಿಚಾರಕರಾಗಿರುತ್ತಾರೆ. ಪೊಲೀಸ್, ಪಂಚಾಯತಿ ಮತ್ತು ಆರೋಗ್ಯ ಇಲಾಖೆ ಪ್ರತಿನಿಧಿಗಳನ್ನು ಇಲ್ಲಿಗೆ ನಿಯೋಜಿಸಲಾಗುತ್ತದೆ. ಘಟನಾ ಕಮಾಂಡರ್ ಅವರಿಗೆ ಈ ಸುತ್ತೋಲೆಯ ಪ್ರಕಾರ ಕಾರ್ಯನಿರ್ವಹಿಸಲು ಅನುವು ಮಾಡಿಕೊಡುವ ನಿಟ್ಟಿನಲ್ಲಿ ಸ್ಥಳೀಯ ಪಂಚಾಯತಿ ಅಧಿಕಾರಿಗಳು ಎಲ್ಲಾ ರೀತಿಯ ಸಹಕಾರವನ್ನು ನೀಡಬೇಕು.

## 2. ಸಂಪೂರ್ಣ ಸೀಲ್ ಡೌನ್- ಪೊಲೀಸರ ಪಾತ್ರ

ಜನವಸತಿ ಪ್ರದೇಶವನ್ನು ನಿಯಂತ್ರಿತ ವಲಯ ಎಂದು ಘೋಷಿಸಿದರೆ ಆ ಪ್ರದೇಶದ ಯಾವುದೇ ವ್ಯಕ್ತಿ ಯಾವುದೇ ಕಾರಣಕ್ಕೂ ಹೊರಗೆ ಬರುವಂತಿಲ್ಲ. ಇಡೀ ಜನವಸತಿ ಪ್ರದೇಶದ ಎಲ್ಲಾ ಪ್ರವೇಶ ಸ್ಥಳಗಳನ್ನು ಪೊಲೀಸರು ಕಾಯಂ ಬ್ಯಾರಿಕೇಡ್ ಗಳಿಂದ ಬಿಗಿಗೊಳಿಸಬೇಕಾಗುತ್ತದೆ. ಅಂತಹ ಇಡೀ ಜನವಸತಿ ಪ್ರದೇಶಕ್ಕೆ ಕೇವಲ ಒಂದೇ ಒಂದು ಪ್ರವೇಶಾತಿ ಸ್ಥಳವನ್ನು ಮತ್ತು ಹೊರ ಹೋಗುವ ಸ್ಥಳವನ್ನು ನಿಗದಿಗೊಳಿಸಲಾಗುತ್ತದೆ. ಅಂತಹ ನಿಯಂತ್ರಿತ ವಲಯ ದ ಒಳಕ್ಕೆ ಅಥವಾ ಅಲ್ಲಿಂದ ಹೊರಕ್ಕೆ ಯಾವುದೇ ವಾಹನ ಸಂಚಾರಕ್ಕೆ ಅವಕಾಶ ಇರುವುದಿಲ್ಲ. ಅಂತಹ ಪ್ರದೇಶವು ಸಂಪೂರ್ಣ ಸೀಲ್ ಡೌನ್ ಆಗುವಂತೆ ಮಾಡುವುದು ಪೊಲೀಸರ ಹೊಣೆಗಾರಿಕೆ ಆಗಿರುತ್ತದೆ.

## 3. ಆರೋಗ್ಯ ಇಲಾಖೆ- ಜವಾಬ್ದಾರಿಗಳು

ನಿಯಂತ್ರಿತ ವಲಯದಲ್ಲಿ ವಿಚಕ್ಷಣೆ ಮತ್ತು ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳುವುದು ಜಿಲ್ಲಾ ಆರೋಗ್ಯ ಅಧಿಕಾರಿಗಳ ಜವಾಬ್ದಾರಿಯಾಗಿರುತ್ತದೆ. ಅಂತಹ ವಲಯದಲ್ಲಿ ಒಂದು ಆರೋಗ್ಯ ಹೊರಠಾಣೆ ಸ್ಥಾಪಿಸಬೇಕಾಗುತ್ತದೆ. ಈ ಹೊರಠಾಣೆಯಲ್ಲಿ ಒಬ್ಬ ವೈದ್ಯರು ಮತ್ತು ಸಾಕಷ್ಟು ಕ್ಷೇತ್ರ ಸಿಬ್ಬಂದಿ ಇರಬೇಕು. ಪ್ರತಿದಿನ ಕಟ್ಟುನಿಟ್ಟಾಗಿ ಐಇಸಿ ಪ್ರಚಾರದ ಜೊತೆಗೆ ದಿನಕ್ಕೆ ಒಂದು ಸಲ ಸೋಂಕು ಸಂಪರ್ಕಿತರ ಜಾಡು ಹಿಡಿಯುವ ಕಾರ್ಯವನ್ನು ಈ ಸಿಬ್ಬಂದಿ ನಿರ್ವಹಿಸಬೇಕು.

ಸಂಹಿತೆಯ ಪ್ರಕಾರ ಸಂಪರ್ಕಿತರನ್ನು ಪತ್ತೆ ಮಾಡುವ ಕಾರ್ಯ ಕೈಗೆತ್ತಿಕೊಳ್ಳುವ ಅಗತ್ಯವಿದೆ. ಕಡಿಮೆ ಅಪಾಯದಲ್ಲಿರುವ (ಲೋ ರಿಸ್ಕ್ ಪ್ರಾಥಮಿಕ) ಸಂಪರ್ಕಿತರನ್ನು ಸಾಂಸ್ಥಿಕ ಕ್ವಾರಂಟೈನ್ ಗೆ ಹಾಗೂ ಕಡಿಮೆ ಅಪಾಯದಲ್ಲಿರುವ (ದ್ವಿತೀಯಕ ಹಂತದ- ಲೋ ರಿಸ್ಕ್ ಸೆಕೆಂಡರಿ) ಸಂಪರ್ಕಿತರನ್ನು ಮನೆಯೊಳಗಿನ ಕ್ವಾರಂಟೈನ್ ಗೆ ತಕ್ಷಣವೇ ಒಳಪಡಿಸುವ ಕಾರ್ಯ ಆಗಬೇಕಾಗಿದೆ. ಇದೇ ವೇಳೆ, ಕೊಳೆಗೇರಿ ಪ್ರದೇಶಗಳಲ್ಲಿ ಸ್ಥಳಾಭಾವದ ಕಾರಣದಿಂದಾಗಿ ಕಡಿಮೆ ಅಪಾಯದಲ್ಲಿ ಇರುವವರಿಗೆ ಕೂಡ ಪರಿಣಾಮಕಾರಿಯಾಗಿ ಹೋಮ್ ಕ್ವಾರಂಟೈನ್ ಅನುಸರಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ, ಕೊಳೆಗೇರಿ ಪ್ರದೇಶಗಳ ಅಂತಹ ಸಂಪರ್ಕಿತರನ್ನು ಕೂಡ ಸಾಂಸ್ಥಿಕ ಕ್ವಾರಂಟೈನ್ ಗೆ ಸ್ಥಳಾಂತರಿಸಬೇಕಾಗುತ್ತದೆ.

ಅಧಿಕ ಅಪಾಯದಲ್ಲಿರುವ ಮತ್ತು ಕಡಿಮೆ ಅಪಾಯದಲ್ಲಿರುವ ಸಂಪರ್ಕಿತರನ್ನು ಪರೀಕ್ಷೆಗೆ ಒಳಪಡಿಸುವ ಜವಾಬ್ದಾರಿ ಆರೋಗ್ಯ ತಂಡಗಳದ್ದಾಗಿರುತ್ತದೆ. ನಿಗದಿತ ಸಂಹಿತೆಯ ಪ್ರಕಾರ ಗಂಟಲ ದ್ರವ ಮಾದರಿ'ಗಳನ್ನು ಸಂಗ್ರಹಿಸಿ ಇದನ್ನು ಮಾಡಬೇಕಾಗುತ್ತದೆ. ಬಿಬಿಎಂಪಿ ಆಯುಕ್ತರು/ಆಯಾ ಜಿಲ್ಲಾಧಿಕಾರಿಯವರು ಯಾವಾಗ ಸೂಕ್ತ ಎಂದು ನಿರ್ಧರಿಸುತ್ತಾರೋ ಆಗ ರಾಪಿಡ್ ಆಂಟಿ-ಬಾಡಿ ಪರೀಕ್ಷೆಗಳನ್ನು ಮಾಡುವ ಮೂಲಕ ಸಮುದಾಯ ಮಟ್ಟದ ಹರಡುವಿಕೆಯನ್ನು ತಡೆಯಲು ಜರೂರು ಕ್ರಮ ಕೈಗೊಳ್ಳಬೇಕಾಗುತ್ತದೆ. ಉರಿಶೀತ ಜ್ವರದಂತಹ ಸೋಂಕುಗಳು (ಐಎಲ್ ಐ ಗಳು) ಅಥವಾ ಗಂಭೀರವಾದ ತೀವ್ರ ಉಸಿರಾಟ ಸೋಂಕು (ಎಸ್ ಎ ಆರ್ ಐ) ಪ್ರಕರಣಗಳನ್ನು ಅಥವಾ ಕೋವಿಡ್-19 ಅನ್ನು ಹೋಲುವ ಯಾವುದೇ ಗುಣಲಕ್ಷಣಗಳನ್ನು ಪತ್ತೆ ಹಚ್ಚುವ ಸಲುವಾಗಿ ಇಡೀ ಪ್ರದೇಶದ ಎಲ್ಲಾ ಜನರ ಹೆಲ್ತ್ ಪ್ರೊಫೈಲಿಂಗ್ (ಆರೋಗ್ಯ ವಿವರ ಪಟ್ಟಿ) ಹಾಗೂ ಅವರಿಗೆ ಚಿಕಿತ್ಸೆ ನೀಡುವ ಕಾರ್ಯವನ್ನು ಆದ್ಯತೆಯ ಕಾರ್ಯವಾಗಿ ಕೈಗೆತ್ತಿಕೊಳ್ಳಬೇಕಾಗುತ್ತದೆ. ಘಟನಾ ಕಮಾಂಡರ್ ಅವರ ಮಾರ್ಗದರ್ಶನದಲ್ಲಿ ಇಂತಹ ಪ್ರದೇಶದಲ್ಲಿ ಅತ್ಯಂತ ಕಟ್ಟುನಿಟ್ಟಾಗಿ ಸಾಮಾಜಿಕ ಅಂತರ ಕಾಪಾಡಲು ಜನರಿಗೆ ಸಲಹೆ ನೀಡಬೇಕಾಗುತ್ತದೆ.

## 4) ನಗರಸಭೆ/ಪುರಸಭೆ/ಗ್ರಾಮಸಭೆ ಜವಾಬ್ದಾರಿ

ನಿಯಂತ್ರಿತ ವಲಯಗಳಲ್ಲಿ ಸಮಗ್ರ ಸ್ವಚ್ಛತೆ ಕಾಪಾಡುವುದು ನಗರಸಭೆ/ಪುರಸಭೆ/ಗ್ರಾಮ ಪಂಚಾಯಿತಿ ಆಡಳಿತದ ಜವಾಬ್ದಾರಿ. ನಿಯಂತ್ರಿತ ವಲಯಗಳಲ್ಲಿ ಘನ ತ್ಯಾಜ್ಯ ನಿರ್ವಹಣೆ ಮತ್ತು ಸೋಂಕು ನಿವಾರಕಗಳ ಸಿಂಪಡಣೆಯನ್ನು ಪ್ರತಿದಿನವೂ ಕೈಗೊಳ್ಳಬೇಕು. ಒಂದೊಮ್ಮೆ ನೀರಿನ ಪೂರೈಕೆಯಲ್ಲಿ

ವ್ಯತ್ಯಯವಾದರೆ ಶುದ್ಧವಾದ ಕುಡಿಯುವ ನೀರು ಪೂರೈಸುವುದು ಅಗತ್ಯ. ಅಗತ್ಯಬಿದ್ದರೆ ಮನೆಮನೆಗೂ ಕುಡಿಯುವ ನೀರನ್ನು ಪೂರೈಕೆ ಮಾಡಬೇಕು. ಈ ಮೇಲಿನ ಕಾರ್ಯಗಳಿಗೆ ನಿಯಂತ್ರಿತ ವಲಯದ ಪ್ರತಿ ನಗರ ಸಭೆ/ಪುರಸಭೆ/ಪಂಚಾಯಿತಿ ಸಿಬ್ಬಂದಿ ಸರ್ಕಾರದ ದೃಢೀಕೃತ ಗುರುತುಪತ್ರವನ್ನು ಹೊಂದಿರಬೇಕು. ಆಡಳಿತ ಕೇಂದ್ರದ ಕಾರ್ಯ ಸುಗಮವಾಗಿ ಸಾಗಲು ಗ್ರಾಮ ಪಂಚಾಯಿತಿಗಳು ಎಲ್ಲ ಸೌಲಭ್ಯವನ್ನೂ ಒದಗಿಸಬೇಕು.

5) **ಅಗತ್ಯ ಪೂರೈಕೆ ನಿರ್ವಹಣೆ**

ನಿಯಂತ್ರಿತ ವಲಯವನ್ನು ಸಂಪೂರ್ಣವಾಗಿ ಸೀಲ್ ಮಾಡುವುದರಿಂದ ದಿನಸಿ, ಮಾಂಸ, ಹಾಲು, ಔಷಧ ಸೇರಿದಂತೆ ಯಾವುದೇ ಮೂಲ ಅಗತ್ಯಗಳಿಗೂ ಜನರು ಮನೆಯಿಂದ ಹೊರಬರುವಂತಿಲ್ಲ. ಈ ಹಿನ್ನೆಲೆಯಲ್ಲಿ ನಿಯಂತ್ರಿತ ವಲಯದೊಳಗೆ ಅಗತ್ಯ ವಸ್ತು ಹಾಗೂ ಸೇವೆಗಳನ್ನು ಒದಗಿಸುವವರಿಗೆ ಪೊಲೀಸರು ಪ್ರವೇಶ ಹಾಗೂ ನಿರ್ಗಮನ ಪಾಸ್ ಗಳನ್ನು ಒದಗಿಸಬೇಕು. ನಿಯಂತ್ರಣ ವಲಯದಲ್ಲಿ ಮೂಲ ಸೌಕರ್ಯ ಒದಗಿಸುವ ದಿನಸಿ, ಮಾಂಸ, ಔಷಧ ಅಂಗಡಿಗಳನ್ನು ಕೂಡ ಮುಚ್ಚಬೇಕು. ರೇಷನ್ ಕಾರ್ಡ್ ದಾರರಿಗೆ ನ್ಯಾಯ ಬೆಲೆ ಅಂಗಡಿಗಳಿಂದ ರೇಷನ್ ಅನ್ನು ಮನೆ ಬಾಗಿಲಿಗೆ ತಲುಪಿಸುವ ವ್ಯವಸ್ಥೆ ಮಾಡಬೇಕು.

ಹೀಗಿದ್ದಾಗ್ಯೂ, ಕೃಷಿ ಚಟುವಟಿಕೆ ಮತ್ತು ಕಾರ್ಯಗಳಿಗೆ ಅನುವು ಮಾಡಿಕೊಡಬೇಕು. ನಿಯಂತ್ರಿತ ವಲಯದ ಆರೋಗ್ಯವಂತ ವ್ಯಕ್ತಿಗಳು ಸಾಮಾಜಿಕ ಅಂತರ ಕಾಯ್ದುಕೊಂಡು, ಮುಖಕ್ಕೆ ರಕ್ಷಣಾ ಮಾಸ್ಕ ಧರಿಸಿ ಕೃಷಿ ಕಾರ್ಯದಲ್ಲಿ ತೊಡಗಬಹುದು.

**IV. ಬಫರ್ ಝೋನ್ ನಿರ್ವಹಣೆ:**

1) ನಿಯಂತ್ರಿತ ವಲಯದ **ಘಟನಾ ಕಮಾಂಡರ್** ನೇಮಕ ಮಾಡಿ ಬಫರ್ ವಲಯವನ್ನು ಅವರ ಜವಾಬ್ದಾರಿಗೆ ವಹಿಸಬಹುದು. ಅವರೂ ಮೇಲ್ಕಂಡ ವ್ಯವಸ್ಥೆಯನ್ನು ಮೇಲ್ವಿಚಾರಣೆಗೆ ಬಳಕೆ ಮಾಡಬಹುದು.

2) **ಅರೆ ಲಾಕ್-ಡೌನ್: ಪೊಲೀಸರ ಜವಾಬ್ದಾರಿ**: ನಿಯಂತ್ರಿತ ವಲಯದ ಸುತ್ತ ಸಾಮಾಜಿಕ ಅಂತರ ನಿಯಂತ್ರಿಸುವ ಜತೆಗೆ ನಾಗರಿಕರ ನಿರ್ಬಂಧಿತ ಸಂಚಾರವನ್ನು ಪೊಲೀಸರು ಖಾತ್ರಿಪಡಿಸಬೇಕು. ಸಾರ್ವಜನಿಕ ಸಮಾರಂಭ, ಜನ ಸೇರುವುದಕ್ಕೆ ಅನುಮತಿ ನೀಡಬಾರದು.

3) **ಆರೋಗ್ಯ ಇಲಾಖೆ:**

ಎ) ಐಎಲ್ಐ (ILI) ಮತ್ತು ಎಸ್ಎಆರ್ ಐ (SARI) ಪ್ರಕರಣಗಳನ್ನು ಗುರುತಿಸಲು ಆರೋಗ್ಯ ಸಿಬ್ಬಂದಿ ಚುರುಕಾಗಿ ಹಾಗೂ ಪರಿಣಾಮಕಾರಿಯಾಗಿ

ಕಾರ್ಯನಿರ್ವಹಿಸಬೇಕು. ಮತ್ತು ಅಂಥವರನ್ನು ಗುರುತಿಸಿ ಜ್ವರ ಕ್ಲಿನಿಕ್ ಹಾಗೂ ಪ್ರತ್ಯೇಕ ನಿಗಾ ಆಸ್ಪತ್ರೆಗಳಿಗೆ ಕಳುಹಿಸುವುದು.

ಬಿ) ಪ್ರತಿ ಕಣ್ಗಾವಲು ತಂಡವೂ ಪ್ರತಿದಿನ 50 ಮನೆಗಳ ತಪಾಸಣೆ ಕೆಲಸ ಮಾಡಬೇಕು ಮತ್ತು ದಿನದಲ್ಲಿ ಎಲ್ಲ ಮನೆಗಳ ಆರೋಗ್ಯ ಸ್ಥಿತಿಗತಿಯ ಮಾಹಿತಿ ಪಡೆದುಕೊಳ್ಳಬೇಕು.

ಸಿ) ಸಾರ್ವಜನಿಕ ಸ್ಥಳದಲ್ಲಿ ಸಾಮಾಜಿಕ ಅಂತರ ಹಾಗೂ ಮಾಸ್ಕ್ ಬಳಕೆಯನ್ನು ಜಾರಿಗೊಳಿಸುವುದು.

**ತಂಡಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಬಿಬಿಎಂಪಿ/ ಆಯುಕ್ತರು ಸೂಕ್ತ ರಕ್ಷಣಾ ಸಲಕರಣೆಗಳಾದ ಗ್ಲೌಸ್, ಮಾಸ್ಕ್, ಸ್ಯಾನಿಟೈಸರ್ ಮತ್ತು ಪಿಪಿಇಗಳನ್ನು (ಎಚ್.ಎಫ್.ಡಬ್ಲ್ಯು ಮಾರ್ಗಸೂಚಿಗಳ ಪ್ರಕಾರ ಪಿಪಿಇಗಳು ಅಗತ್ಯವಿದ್ದರೆ) ಒದಗಿಸಬೇಕು.**

**(ಟಿ.ಎಂ. ವಿಜಯ್ ಭಾಸ್ಕರ್)**
**ಸರ್ಕಾರದ ಮುಖ್ಯ ಕಾರ್ಯದರ್ಶಿ**
**ಕರ್ನಾಟಕ ಸರ್ಕಾರ**

**ಇವರಿಗೆ**

1. ಅಪರ ಮುಖ್ಯ ಕಾರ್ಯದರ್ಶಿಗಳು, ಆಕುಕ ಇಲಾಖೆ
2. ಆಯುಕ್ತರು, ಬಿಬಿಎಂಪಿ
3. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆ
4. ಅಭಿಯಾನ ನಿರ್ದೇಶಕರು, ಎನ್ಎಚ್ಎಂ
5. ಎಲ್ಲಾ ಜಿಲ್ಲಾಧಿಕಾರಿಗಳು
6. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆ
7. ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ



# ಕರ್ನಾಟಕ ಸರ್ಕಾರ

ಸಂಖ್ಯೆ: ಆಕುಕ 109 ಅಮುಕಾ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಧಾನಸೌಧ
ಬೆಂಗಳೂರು, ದಿನಾಂಕ: 17-04-2020.

## ಸುತ್ತೋಲೆ

**ವಿಷಯ:** ನಿಯಂತ್ರಣ ವಲಯದ ಪರಿಭಾಷೆ ಹಾಗೂ ಅವುಗಳ ನಿರ್ವಹಣೆ, ಎಸ್.ಓ.ಪಿ. ಬಗ್ಗೆ.

**ಉಲ್ಲೇಖ:** ಸುತ್ತೋಲೆ ಸಂಖ್ಯೆ HFW 100 ACS 2020 ದಿನಾಂಕ: 11.04.2020.

*****

ಹಾಟ್-ಸ್ಪಾಟ್, ನಿಯಂತ್ರಣ ವಲಯ ಮತ್ತು ಕ್ಲಸ್ಟರ್ ಇದರ ಪರಿಭಾಷೆಗೆ ಸಂಬಂಧಿಸಿದಂತೆ ಮೇಲಿನ ಪ್ರಸ್ತಾಪವನ್ನು ಉಲ್ಲೇಖಿಸಿ ಈ ಕಚೇರಿಯು ಈ ಸುತ್ತೋಲೆಯನ್ನು ಹೊರಡಿಸಿದೆ. ಆದಾಗ್ಯೂ, ವಿಸ್ತೃತವಾದ ಚರ್ಚೆ ಮತ್ತು ಎಚ್ಚರಿಕೆಯ ಪರಿಶೀಲನೆಯ ನಂತರ, ಅನೇಕ ಲಾಕ್-ಡೌನ್ ಕ್ರಮಗಳು ಮತ್ತು ಕೋವಿಡ್-19 ವೈರಸ್ ನಿಯಂತ್ರಣ ಕಾರ್ಯತಂತ್ರಗಳ ಸುಲಭ ಅನುಷ್ಠಾನಕ್ಕೆ ಪರಿಭಾಷೆಗಳಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಬೇಕಾದ ಅಗತ್ಯವನ್ನು ಮನಗಂಡಿದೆ. ಹಾಗಾಗಿ ಮೇಲೆ ಉಲ್ಲೇಖಿಸಲಾದ ಸುತ್ತೋಲೆಯನ್ನು ಹಿಂಪಡೆಯಲಾಗಿದೆ.

1. **ಈ ಕೆಳಗಿನವು ಪರಿಷ್ಕೃತ ಪರಿಭಾಷೆಗಳಾಗಿದ್ದು ಅವುಗಳ ನಿರ್ವಹಣೆಗಾಗಿ ವಿವರವಾದ ಕಾರ್ಯತಂತ್ರಗಳೂ ಒಳಗೊಂಡಿವೆ:**

**1. ನಿಯಂತ್ರಿತ ವಲಯ:**

ನಿಯಂತ್ರಿತ ವಲಯ ಎಂದರೆ, ನೋವೆಲ್ ಕೊರೊನಾ ವೈರಸ್-ಪಾಸಿಟಿವ್ ವ್ಯಕ್ತಿಯ ನಿವಾಸ ಇರುವ ಸುತ್ತಲಿನ "ಪ್ರದೇಶ" -ಇಲ್ಲಿ ವೈರಲ್ ಸೋಂಕು ಹರಡದಂತೆ ಅತ್ಯಂತ ತೀವ್ರತರದ ಕ್ರಮಗಳನ್ನು ಅನುಷ್ಠಾನಕ್ಕೆ ತರಬೇಕಾದ ಅಗತ್ಯವಿರುತ್ತದೆ. ಈ "ಪ್ರದೇಶ"ವು ಎಲ್ಲಿಯವರೆಗೆ ನಿಯಂತ್ರಿತ ವಲಯವಾಗಿರುತ್ತದೆ ಎಂದರೆ;

i. ಹಿಂದಿನ ಬಾರಿ ಪಾಸಿಟಿವ್ ಪ್ರಕರಣ ವರದಿಯಾದ 28 ದಿನಗಳ ಅವಧಿಯಲ್ಲಿ ಯಾವುದೇ ಹೊಸ ಕೋವಿಡ್-19 ಪ್ರಕರಣ ಆ ಪ್ರದೇಶದಲ್ಲಿ ವರದಿಯಾಗಿರಬಾರದು ಅಥವಾ
ii. ನಿಯಂತ್ರಿತ ವಲಯದಲ್ಲಿ ಹತ್ತಕ್ಕಿಂತ ಕಡಿಮೆ ಪ್ರಾಥಮಿಕ ಮತ್ತು ದ್ವಿತೀಯಕ ಸಂಪರ್ಕಗಳು ಸಕ್ರಿಯ ಗೃಹ ದಿಗ್ಬಂಧನದಲ್ಲಿ (ಈ ಹಿಂದೆ ಪರಿಭಾಷಿಸಿದಂತೆ) ಇರಬೇಕು.

"ಪ್ರದೇಶ"ವನ್ನು ಈ ಮುಂದಿನಂತೆ ಪರಿಭಾಷಿಸಲಾಗಿದೆ:

ಎ) ಅಪಾರ್ಟ್‌ಮೆಂಟ್ ಸಂಕೀರ್ಣಕ್ಕೆ- ಕೋವಿಡ್-ಪಾಸಿಟಿವ್ ವ್ಯಕ್ತಿಯ ನಿವಾಸ ಇರುವ ನಿರ್ದಿಷ್ಟ ಟವರ್/ಬ್ಲಾಕ್. ಒಂದು ವೇಳೆ ಒಂದೇ ಬ್ಲಾಕ್ ಅಪಾರ್ಟಮೆಂಟ್ ಆಗಿದ್ದರೆ ಆಗ ಇಡೀ ಅಪಾರ್ಟಮೆಂಟ್.

ಬಿ) ಪ್ರತ್ಯೇಕ ಮನೆ/ವಿಲ್ಲಾ: ಕೋವಿಡ್-ಪಾಸಿಟಿವ್ ವ್ಯಕ್ತಿಯ ಮನೆ ಇರುವ ರಸ್ತೆಯನ್ನು ಒಳಗೊಂಡ/ಭೌತಿಕ ಪರಿಧಿಯ 100 ಮೀಟರ್ ಸುತ್ತಮುತ್ತಲಿನ ಪ್ರದೇಶ.

ಸಿ) ಕೊಳಚೆ ಪ್ರದೇಶಕ್ಕೆ: (ಅಧಿಸೂಚಿತ ಅಥವಾ ಅನ್ಯಥಾ) ಕೋವಿಡ್-ಪಾಸಿಟಿವ್ ವ್ಯಕ್ತಿಯ ಮನೆ ಇರುವ ರಸ್ತೆಯನ್ನೂ ಒಳಗೊಂಡ/ಭೌತಿಕ 100 ಮೀಟರ್ ಪರಿಧಿಯ ಇಡೀ ಕೊಳೆಗೇರಿ.

ಡಿ) ಗ್ರಾಮೀಣ ಪ್ರದೇಶಕ್ಕೆ: ಕೋವಿಡ್-ಪಾಸಿಟಿವ್ ವ್ಯಕ್ತಿ ವಾಸವಿರುವ ಅಥವಾ ಹರಡಿರುವ ಸಣ್ಣ ಪ್ರದೇಶ - ಅಗತ್ಯಕ್ಕೆ ತಕ್ಕಂತೆ ಇಡೀ ವಾಸದ ಪ್ರದೇಶ ಎಂದು ಭಾವಿಸತಕ್ಕದ್ದು.

ಮೇಲೆ ಪರಿಭಾಷಿಸಲಾದಂತೆ ರಸ್ತೆಗಳು ಅಥವಾ ಇತರ ಸ್ವರೂಪಗಳನ್ನು ಬಿಬಿಎಂಪಿಯ ಆಯುಕ್ತರು/ಜಿಲ್ಲೆಯ ಜಿಲ್ಲಾಧಿಕಾರಿಗಳು "ಪ್ರದೇಶ" ಎಂದು ಗಡಿರೇಖೆಯನ್ನು ನಿರ್ದಿಷ್ಟ ಪಡಿಸಿರುತ್ತಾರೆ.

2. ಬಫರ್ ಝೋನ್:

ಬಫರ್ ಝೋನ್ ಎಂದರೆ ನಿಯಂತ್ರಿತ ವಲಯದ ಸುತ್ತ ಇರುವ ನಗರ ಪ್ರದೇಶದ 5 ಕಿ.ಮೀ. ವ್ಯಾಪ್ತಿ ಮತ್ತು ಗ್ರಾಮೀಣ ಪ್ರದೇಶದ 7 ಕಿ.ಮೀ. ವ್ಯಾಪ್ತಿ. ಕೋವಿಡ್-19 ಸೋಂಕು ಹರಡದಂತೆ ತಡೆಯಲು ಬಫರ್ ಝೋನ್‌ನಲ್ಲಿ ಸದಾ ಕಣ್ಗಾವಲು ಮತ್ತು ಸಾಮಾಜಿಕ ಅಂತರದ ಕ್ರಮಗಳು ಜಾರಿಯಲ್ಲಿರಬೇಕು.

ಈ ಬಫರ್ ಝೋನ್‌ನ ಒಂದು ಕಿ.ಮೀ. ವ್ಯಾಪ್ತಿಯಲ್ಲಿ ತೀವ್ರ ಬಫರ್ ಝೋನ್ ಇರಲಿದ್ದು ಅಲ್ಲಿ ಪ್ರತಿ ಮನೆಗಳಲ್ಲೂ ತಪಾಸಣೆ ನಡೆಸಬೇಕಾಗುತ್ತದೆ

ಒಂದು ಪ್ರದೇಶವನ್ನು ನಿಯಂತ್ರಿತ ವಲಯ ಎಂದು ಘೋಷಣೆ ಮಾಡಿದ 28 ದಿನಗಳ ಒಳಗೆ ಅಲ್ಲಿ ಯಾವುದೇ ಹೊಸ ಕೋವಿಡ್-19 ಪ್ರಕರಣ ವರದಿಯಾಗದೇ ಇದ್ದರೆ ಅಥವಾ ಆ ನಿಯಂತ್ರಿತ ವಲಯದಲ್ಲಿ ಹತ್ತಕ್ಕಿಂತ ಕಡಿಮೆ ಸಂಪರ್ಕಗಳು/ಗೃಹ ದಿಗ್ಬಂಧನದಲ್ಲಿ ಸಕ್ರಿಯವಾಗಿದ್ದರೆ (ಈ ಹಿಂದೆ ಪರಿಭಾಷಿಸಲಾದಂತೆ) ಆಗ ಆ ನಿಯಂತ್ರಿತ ವಲಯವು ಸಾಮಾನ್ಯ ವಲಯವಾಗಿ ಮತ್ತು ಬಫರ್ ಝೋನ್ ಸಾಮಾನ್ಯ ವಲಯವಾಗಿ ಬದಲಾಗುತ್ತದೆ.

3. ವಲಯ:

ಸಾಂಕ್ರಾಮಿಕ ಶಾಸ್ತ್ರದ ಪ್ರಕಾರ ಸಂಪರ್ಕವನ್ನು ಹೊಂದಿರುವ ಕೋವಿಡ್-ಪಾಸಿಟಿವ್ ಪ್ರಕರಣಗಳ ಒಟ್ಟು ಗುಂಪನ್ನು ಅಥವಾ ಸಮುದಾಯವನ್ನು ವಲಯ ಎಂದು ಕರೆಯಲಾಗುತ್ತದೆ. ಇಲ್ಲಿನ ಪ್ರಕರಣಗಳು ಒಬ್ಬ ನಿರ್ದಿಷ್ಟ ಕೋವಿಡ್-ಪಾಸಿಟಿವ್ ವ್ಯಕ್ತಿಗೆ ಸಂಬಂಧಿಸಿದ್ದಾಗಿದ್ದು ಆ ಚಿಕ್ಕ ಪ್ರದೇಶದಲ್ಲಿ ಅಂತಹ ಅನೇಕ ಪ್ರಕರಣಗಳು ಕಂಡುಬಂದಿರುತ್ತವೆ.

II ಬಿಬಿಎಂಪಿ ಮತ್ತು ನಗರ ಪ್ರದೇಶಗಳಲ್ಲಿ ಪ್ರಮಾಣಿತ ಕಾರ್ಯನಿರ್ವಹಣಾ ಕಾರ್ಯ ವಿಧಾನ

1. ಘಟನಾ ನಿಯಂತ್ರಕ- ಬಿಕ್ಕಟ್ಟು ನಿರ್ವಹಣಾ ತಂಡ

ಒಮ್ಮೆ ಬಿಬಿಎಂಪಿ ಒಂದು ಪ್ರದೇಶವನ್ನು ನಿಯಂತ್ರಿತ ಪ್ರದೇಶ ಎಂದು ಘೋಷಣೆ ಮಾಡಿದ ಬಳಿಕ, ಪ್ರತಿಯೊಂದು ನಿಯಂತ್ರಿತ ವಲಯಕ್ಕೆ ಒಬ್ಬ ಎಕ್ಸಿಕ್ಯೂಟಿವ್ ಮ್ಯಾಜಿಸ್ಟ್ರೇಟ್ ಅಥವಾ ಒಂದನೇ ದರ್ಜೆಯ ಅಧಿಕಾರಿಗೆ ದಂಡಾಧಿಕಾರಿಯ ಅಧಿಕಾರಗಳನ್ನು ನೀಡಿ ಅವರನ್ನು ಘಟನಾ ನಿಯಂತ್ರಕ (ಕಮಾಂಡರ್)ನನ್ನಾಗಿ ಆಯುಕ್ತರು ನೇಮಕ ಮಾಡಬೇಕು. ಈ ಕಮಾಂಡರ್ ಬಫರ್ ವಲಯದ ಒಟ್ಟಾರೆ ನಿರ್ವಹಣೆಗೆ ಪೂರ್ಣ ಜವಾಬ್ದಾರನಾಗಿರುತ್ತಾನೆ. ಬಿಬಿಎಂಪಿ ಪ್ರದೇಶಗಳನ್ನು ಹೊರತುಪಡಿಸಿದ ಪ್ರಕರಣಗಳಲ್ಲಿ ಪ್ರತಿ ನಿಯಂತ್ರಿತ ವಲಯ ಮತ್ತು ಬಫರ್ ವಲಯಕ್ಕೆ ಜಿಲ್ಲಾಧಿಕಾರಿಯು ಘಟನಾ ನಿಯಂತ್ರಕನನ್ನು ಮೇಲಿನ ಕ್ರಮದಂತೆ ನೇಮಕ ಮಾಡಬೇಕಾಗುತ್ತದೆ. ನಿಯಂತ್ರಿತ ವಲಯಕ್ಕೆ ವಿನ್ಯಾಸಗೊಳಿಸಲಾದ ಎಸ್.ಓ.ಪಿ ವಲಯದಲ್ಲಿಯೂ ಜಾರಿಯಲ್ಲಿರುತ್ತದೆ.

ಬಿಬಿಎಂಪಿ ಪ್ರದೇಶದಲ್ಲಿನ ಘಟನಾ ಕಮಾಂಡರ್ ಬಿಬಿಎಂಪಿಯ ಹಿರಿಯ ಅಥವಾ ಕಿರಿಯ ಪ್ರಥಮ ದರ್ಜೆ ಅಧಿಕಾರಿಯಾಗಿರಬೇಕು. ಆತನನ್ನು ಈ ಉದ್ದೇಶಕ್ಕಾಗಿ ದಂಡಾಧಿಕಾರಿಯ ಅಧಿಕಾರವನ್ನು ನೀಡಿ ವಿಶೇಷವಾಗಿ ನೇಮಕ ಮಾಡಿರಬೇಕು. ಬಿಬಿಎಂಪಿಯೇತರ ಪ್ರದೇಶಗಳಲ್ಲಿ ಜಿಲ್ಲಾಧಿಕಾರಿಯು ಒಂದು ಅಥವಾ ಅದಕ್ಕಿಂತ ಹೆಚ್ಚಿನ ನಿಯಂತ್ರಿತ ವಲಯಕ್ಕೆ ತಾಲೂಕು/ಜಿಲ್ಲಾ ಮಟ್ಟದ ಅಧಿಕಾರಿಯನ್ನು ಘಟನಾ ಕಮಾಂಡರ್ ಆಗಿ ನೇಮಕ ಮಾಡಬಹುದು.

ನಿಯಂತ್ರಿತ ವಲಯದ ನಿರ್ವಹಣೆಗೆ ಸಂಬಂಧಿಸಿದಂತೆ ಬಿಬಿಎಂಪಿ ಆಯುಕ್ತರು/ಆಯಾ ಜಿಲ್ಲಾಧಿಕಾರಿ ಮಾರ್ಗದರ್ಶನದಲ್ಲಿ ಗಡಿಗಳ ನಿಗದಿಯೂ ಸೇರಿದಂತೆ ಎಲ್ಲಾ ತೀರ್ಮಾನಗಳನ್ನು ಕೈಗೊಳ್ಳುವ ಜವಾಬ್ದಾರಿ ಘಟನಾ ಕಮಾಂಡರ್ ಅವರದಾಗಿರುತ್ತದೆ. ಸರ್ಕಾರದ ನಿರ್ದೇಶನಗಳಿಗೆ ಅನುಗುಣವಾಗಿ ದಿನನಿತ್ಯದ ನಿರ್ವಹಣೆ ಘಟನಾ ಕಮಾಂಡರ್ ಹೊಣೆಗಾರಿಕೆಯಾಗಿರುತ್ತದೆ. ನಿಯಂತ್ರಿತ ವಲಯದ ಗಡಿಗಳನ್ನು ಸ್ಪಷ್ಟವಾಗಿ ಗುರುತಿಸಬೇಕು ಹಾಗೂ ಪ್ರವೇಶ ಮತ್ತು ನಿರ್ಗಮನ ಪಾಯಿಂಟ್‌ಗಳನ್ನು ಗುರುತಿಸಬೇಕು.

ನಿಯಂತ್ರಿತ ವಲಯದ ಕಣ್ಣಳತೆ ದೂರದಲ್ಲಿ ಘಟನಾ ಕಮಾಂಡ್ ಕೇಂದ್ರವನ್ನು ಸ್ಥಾಪಿಸಬೇಕು ಹಾಗೂ ಘಟನಾ ಕಮಾಂಡರ್ ಅಲ್ಲಿಂದಲೇ ಕಾರ್ಯನಿರ್ವಹಿಸಬೇಕು. ಘಟನಾ ಕಮಾಂಡರ್ ಕೇಂದ್ರ ಕೇಂದ್ರೀಕೃತ ನಿಯಂತ್ರಣ ಕೊಠಡಿಯನ್ನು ಹೊಂದಿದ್ದು ಆ ನಿಯಂತ್ರಣ ಕೊಠಡಿಗೆ ನಿಯೋಜಿಸಲ್ಪಟ್ಟಿರುವ ಪೊಲೀಸ್, ನಗರಸಭೆ ಮತ್ತು ಆರೋಗ್ಯ ಪ್ರಾಧಿಕಾರಗಳ ಪ್ರತಿನಿಧಿಗಳ ನೆರವಿನೊಂದಿಗೆ ಘಟನಾ ಕಮಾಂಡರ್ ಮೇಲ್ವಿಚಾರಣೆಯಲ್ಲಿ ಕಾರ್ಯನಿರ್ವಹಿಸುತ್ತದೆ. ಅದು ದಿನದ 24 ತಾಸು ಕಾರ್ಯನಿರತವಾಗಿದ್ದು ಅದರಲ್ಲಿರುವ ಸಿಬ್ಬಂದಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗಿರುತ್ತದೆ. ಈ ಕಮಾಂಡ್ ಕೇಂದ್ರದ ಸುಗಮ ಕಾರ್ಯನಿರ್ವಹಣೆಗೆ ಅಗತ್ಯವಾದ ಎಲ್ಲ ಸೌಕರ್ಯಗಳನ್ನು ಬಿಬಿಎಂಪಿ/ನಗರಸಭೆ ಒದಗಿಸತಕ್ಕದ್ದು.

ನಿಯಂತ್ರಿತ ವಲಯದಲ್ಲಿ ನಿಯಂತ್ರಣ ನಿಯಮ ಜಾರಿಗೆ ತರಲು ವಿಶೇಷ ತಂಡಗಳನ್ನು ರಚಿಸಬೇಕು. ಘಟನಾ ಕಮಾಂಡರ್ ನಿಯಂತ್ರಿತ ವಲಯದಲ್ಲಿ ಲಾಕ್-ಡೌನ್ ಜಾರಿಗೊಳಿಸಲು ಸಂಚಾರಿ ತಂಡಗಳನ್ನು ಆಯಾ ವ್ಯಾಪ್ತಿಯಲ್ಲಿ ನಿಯೋಜಿಸಬೇಕು. ನಿಯಂತ್ರಿತ ವಲಯದಲ್ಲಿ ವಾಸಿಸುವ ಜನರ ವಿಶೇಷ ಅವಶ್ಯಕತೆಗಳನ್ನು (ಗರ್ಭಿಣಿಯರು, ಹೃದ್ರೋಗಿಗಳು, ಇತ್ಯಾದಿ) ಅಂದಾಜು ಮಾಡಿ ಅಂತಹವರಿಗೆ ತುರ್ತು ಸಂದರ್ಭಗಳಲ್ಲಿ ನೆರವು ಒದಗಿಸಲು ಸ್ಥಳೀಯ ಸಂಘಗಳ ಸಹಕಾರದೊಂದಿಗೆ ಸೂಕ್ತ ಏರ್ಪಾಡುಗಳನ್ನು ಮಾಡಿಕೊಳ್ಳಬೇಕು. ಆಯಾ ಬಿಬಿಎಂಪಿ ವಲಯದ ಜಂಟಿ

ಆಯುಕ್ತರು/ ನಗರಸಭೆಯ ಚೀಫ್ ಆಫೀಸರ್ ಘಟನಾ ಕಮಾಂಡರ್‌ಗೆ ಅವನ/ಅವಳ ಕರ್ತವ್ಯಗಳನ್ನು ಸಮರ್ಪಕವಾಗಿ ನಿಭಾಯಿಸಲು ಅಗತ್ಯ ಸಿಬ್ಬಂದಿ ಒದಗಿಸುವುದರೊಂದಿಗೆ ಸಕಲ ನೆರವು ನೀಡಬೇಕು.

**2. ಸಂಪೂರ್ಣ ಸೀಲ್ ಡೌನ್- ಪೊಲೀಸರ ಪಾತ್ರ**

ನಿಯಂತ್ರಿತ ವಲಯವನ್ನು ಎಲ್ಲಾ ಪ್ರವೇಶ ದ್ವಾರಗಳಲ್ಲೂ ಶಾಶ್ವತವಾಗಿ ತಡೆಗೋಡೆ ಹಾಕುವ ಮೂಲಕ ಪೊಲೀಸರು ನಾಕಾಬಂದಿ ಮಾಡಬೇಕು. ನಿಯಂತ್ರಿತ ಪ್ರದೇಶದಲ್ಲಿ ಯಾವುದೇ ವ್ಯಕ್ತಿ ಯಾವುದೇ ರೀತಿಯ ಉದ್ದೇಶಗಳಿಗೆ ಮನೆಗಳಿಂದ ಹೊರಗೆ ಬರಲು ಅವಕಾಶ ನೀಡಲಾಗುವುದಿಲ್ಲ. ಪ್ರತಿಯೊಂದು ನಿಯಂತ್ರಿತ ವಲಯದಲ್ಲಿ ಒಂದೇ ಒಂದು ಪ್ರವೇಶ ಮತ್ತು ನಿರ್ಗಮನ ದ್ವಾರವಿರಬೇಕು. ನಿಯಂತ್ರಿತ ವಲಯದ ಒಳಗೆ ಮತ್ತು ಹೊರಗೆ ಯಾವುದೇ ಖಾಸಗಿ ವಾಹನ ಸಂಚಾರಕ್ಕೆ ಅವಕಾಶ ನೀಡಬಾರದು. ಇಡೀ ಪ್ರದೇಶ ಸಂಪೂರ್ಣವಾಗಿ ಸೀಲ್ ಆಗಿರುವಂತೆ ನೋಡಿಕೊಳ್ಳುವ ಜವಾಬ್ದಾರಿ ಪೊಲೀಸ್ ಸಿಬ್ಬಂದಿಯದ್ದಾಗಿರುತ್ತದೆ.

ಮುಂದುವರೆದು, ಪೊಲೀಸರು ಕರ್ಫ್ಯೂ ನಿರ್ವಹಣೆಯ ಹೊಣೆಗಾರಿಕೆಯನ್ನೂ ನಿರ್ವಹಿಸಬೇಕು. ಅಗತ್ಯ ಸೇವೆಗಳು ಮತ್ತು ವೈದ್ಯಕೀಯ ತುರ್ತು ಸಂದರ್ಭಗಳಿಗೆ ಪೊಲೀಸರು ಎಮರ್ಜೆನ್ಸಿ ಪಾಸ್‌ಗಳನ್ನು ವಿತರಿಸುವ ಮೂಲಕ ಅವಕಾಶ ನೀಡಬೇಕು. ಸೀಲ್ ಡೌನ್ ಜಾರಿಗೆ ತಂತ್ರಜ್ಞಾನವನ್ನು ಬಳಸಿಕೊಳ್ಳಬೇಕು. ನಿಯಂತ್ರಿತ ವಲಯದಲ್ಲಿ ಸಂಪೂರ್ಣ ಲಾಕ್ ಡೌನ್ ಖಾತರಿಪಡಿಸಲು ಡ್ರೋನ್ ಗಳನ್ನು ಪರಿಣಾಮಕಾರಿಯಾಗಿ ಬಳಸಬೇಕು.

**3. ಆರೋಗ್ಯ ಇಲಾಖೆ ಜವಾಬ್ದಾರಿಗಳು**

ರಾಜ್ಯ ಆರೋಗ್ಯ ಇಲಾಖೆ ಮತ್ತು ನಗರಾಡಳಿತ ಆರೋಗ್ಯಾಧಿಕಾರಿಗಳು ಜಂಟಿಯಾಗಿ ಮೇಲ್ವಿಚಾರಣೆ ಮತ್ತು ಮುನ್ನೆಚ್ಚರಿಕೆ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕು. ಅಂತಹ ವಲಯದಲ್ಲಿ ಆರೋಗ್ಯ ಔಟ್-ಪೋಸ್ಟ್ ಆರಂಭಿಸಿ ಓರ್ವ ವೈದ್ಯ ಹಾಗೂ ಸತತ ಐಇಸಿ ಪ್ರಚಾರದ ಜೊತೆಗೆ ದಿನಕ್ಕೆರಡು ಬಾರಿ ಜನಸಂಪರ್ಕಗಳ ಪತ್ತೆ ಕಾರ್ಯಕ್ಕೆ ಅಗತ್ಯ ಸಂಖ್ಯೆಯ ಕ್ಷೇತ್ರ ಸಿಬ್ಬಂದಿಯನ್ನು ನಿಯೋಜಿಸಬೇಕು.

ಜನಸಂಪರ್ಕ ನಿಗಾ ಮತ್ತು ಪತ್ತೆ ಕಾರ್ಯವನ್ನು ಶಿಷ್ಟಾಚಾರದ ನಿಯಮಗಳ ಪ್ರಕಾರ ನಡೆಸಬೇಕು. ಹೆಚ್ಚಿನ ರಿಸ್ಕ್ (ಪ್ರಾಥಮಿಕ) ಸಂಪರ್ಕದ ವ್ಯಕ್ತಿಗಳನ್ನು ತಕ್ಷಣವೇ ಸಾಂಸ್ಥಿಕ ದಿಗ್ಬಂಧನ ಕೇಂದ್ರಕ್ಕೆ ರವಾನಿಸುವ ಹಾಗೂ ಕಡಿಮೆ ರಿಸ್ಕ್ (ದ್ವಿತೀಯ) ಸಂಪರ್ಕದ ವ್ಯಕ್ತಿಗಳನ್ನು ಗೃಹ ದಿಗ್ಬಂಧನಕ್ಕೆ ಒಳಪಡಿಸಬೇಕು. ಕೊಳೆಗೇರಿಗಳಲ್ಲಿ ಸ್ಥಳಾಭಾವದ ಕಾರಣ ಕಡಿಮೆ ರಿಸ್ಕ್ ವ್ಯಕ್ತಿಗಳೂ ಹೋಮ್ ಕ್ವಾರಂಟೈನ್ ಪರಿಣಾಮಕಾರಿಯಾಗಿ ಪಾಲಿಸಲು ಸಾಧ್ಯವಾಗದೆಂಬ ಅಂಶ ಸರ್ವವಿಧಿತವಾದುದು. ಆದ್ದರಿಂದ ಅಂತಹ ವ್ಯಕ್ತಿಗಳನ್ನು ಕೊಳಗೇರಿಗಳ ಸಾಂಸ್ಥಿಕ ಕ್ವಾರಂಟೈನ್ ಕೇಂದ್ರಗಳಿಗೆ ಸ್ಥಳಾಂತರಿಸಬೇಕು.ಅಧಿಕ ಅಪಾಯ ಮತ್ತು ಕಡಿಮೆ ಅಪಾಯವಿರುವ ವ್ಯಕ್ತಿಗಳಿಂದ ಗಂಟಲು ದ್ರವ ಮಾದರಿಗಳನ್ನು ಸಂಗ್ರಹಿಸಿ ಪರೀಕ್ಷೆಗೊಳಪಡಿಸುವ ಹೊಣೆಗಾರಿಕೆ ಆರೋಗ್ಯ ಇಲಾಖೆ ತಂಡದ್ದಾಗಿರುತ್ತದೆ. ಸೂಕ್ತವೆನಿಸಿದ ಸಂದರ್ಭಗಳಲ್ಲಿ ಬಿಬಿಎಂಪಿ ಆಯುಕ್ತರು/ಜಿಲ್ಲೆಯ ಜಿಲ್ಲಾಧಿಕಾರಿ ಸಮುದಾಯ ಸೋಂಕು ಹರಡುವಿಕೆ ಸಾಧ್ಯತೆಗಳನ್ನು ತಪ್ಪಿಸಲು ತ್ವರಿತ ರೋಗ ಪತ್ತೆ ಪರೀಕ್ಷೆಗಳನ್ನು ನಡೆಸಬೇಕು.

ಇನ್-ಫ್ಲೂಯೆನ್ಜಾದಂತಹ ಸೋಂಕುಗಳ (ಐ.ಎಲ್.ಐ) ಪತ್ತೆಗೆ ಇಡೀ ಜನಸಂಖ್ಯೆಯ ಆರೋಗ್ಯ ಮಾಹಿತಿ ಅಥವಾ ಅತಿತೀವ್ರ ಉಸಿರಾಟದ ತೊಂದರೆ (ಎಸ್.ಎ.ಆರ್) ಪ್ರಕರಣಗಳು ಅಥವಾ ಕೋವಿಡ್-19ನ್ನು ಹೋಲುವ ಯಾವುದೇ ರೋಗ ಲಕ್ಷಣಗಳನ್ನು ಗಮನಿಸಿ ಅಂತಹವರಿಗೆ ಆದ್ಯತೆಯ ಮೇರೆಗೆ ಚಿಕಿತ್ಸೆ ಒದಗಿಸಬೇಕು. ಅಂತಹ

ಪ್ರದೇಶದಲ್ಲಿ ಅತ್ಯಂತ ಕಟ್ಟುನಿಟ್ಟಿನ ಸಾಮಾಜಿಕ ಅಂತರ ಕಾಯ್ದುಕೊಳ್ಳುವಂತೆ ಘಟನಾ ಕಮಾಂಡರ್ ಮಾರ್ಗದರ್ಶನದಲ್ಲಿ ಈ ತಂಡ ಪ್ರಚಾರ ಮಾಡುತ್ತಿರಬೇಕು. ಆರೋಗ್ಯ ಇಲಾಖೆ ಮಾಸ್ಕ್‌ಗಳು ಹಾಗೂ ಇತರೆ ಸಾಮಗ್ರಿಗಳನ್ನು ಒದಗಿಸುವ ಮೂಲಕ ಗೃಹ ದಿಗ್ಬಂಧನ ಮತ್ತು ಸಾಮಾಜಿಕ ಅಂತರ ಕ್ರಮಗಳ ಪಾಲನೆಗೆ ನೆರವಾಗಬೇಕು.

ಆರೋಗ್ಯ ಸಂಬಂಧಿ ಚಟುವಟಿಕೆಗಳನ್ನು ಘಟನಾ ನಿಯಂತ್ರಕನ ಸಮಗ್ರ ಮೇಲ್ವಿಚಾರಣೆಯಲ್ಲಿ ಕೈಗೊಳ್ಳಲಾಗುತ್ತದೆ.

**4. ನಗರಸಭೆ ಅಧಿಕಾರಿಗಳ ಜವಾಬ್ದಾರಿ;**

ನಿಯಂತ್ರಿತ ವಲಯದಲ್ಲಿ ಒಟ್ಟಾರೆಯಾಗಿ ನೈರ್ಮಲೀಕರಣದ ನಿರ್ವಹಣೆ ಮಾಡುವುದು ಬಿಬಿಎಂಪಿ/ನಗರಸಭೆ ಅಧಿಕಾರಿಗಳ ಜವಾಬ್ದಾರಿಯಾಗಿರುತ್ತದೆ. ನಿಯಂತ್ರಿತ ವಲಯದಲ್ಲಿ ಪ್ರತಿದಿನವೂ ಘನತ್ಯಾಜ್ಯ ನಿರ್ವಹಣೆ (ಬಯೋ ಮೆಡಿಕಲ್ ತ್ಯಾಜ್ಯ ಸೇರಿದಂತೆ) ಮತ್ತು ಸೋಂಕು ನಿವಾರಣೆ ಸ್ಪ್ರೇ ಮಾಡುವ ಕೆಲಸವನ್ನು ನಿರ್ವಹಿಸತಕ್ಕದ್ದು. ಕುಡಿಯುವ ನೀರಿನ ಕೊರತೆ ಕಂಡುಬಂದರೆ ಅದನ್ನು ಸರಿದೂಗಿಸಲು ಕ್ರಮ ಕೈಗೊಳ್ಳಬೇಕು. ಅಗತ್ಯವೆನಿಸಿದರೆ ಪ್ರತಿ ಮನೆಗಳಿಗೆ ನೀರನ್ನು ಸರಬರಾಜು ಮಾಡುವ ಕೆಲಸವನ್ನೂ ಮಾಡಬೇಕು. ಅಗತ್ಯವಿರುವವರಿಗೆ ಬಿಬಿಎಂಪಿ/ನಗರಸಭೆ ಅಧಿಕಾರಿಗಳು ಆಹಾರ ಪೊಟ್ಟಣಗಳು ಮತ್ತು ಪಡಿತರವನ್ನು ಒದಗಿಸಬೇಕು. ಈ ಮೇಲೆ ಪ್ರಸ್ತಾಪ ಮಾಡಿದ ಕೆಲಸಗಳನ್ನು ನಿರ್ವಹಿಸಲು ಹಾಟ್-ಸ್ಪಾಟ್ ವಲಯಗಳಲ್ಲಿ ಸರ್ಕಾರಿ ಗುರುತಿನ ಪತ್ರಗಳನ್ನು ಹೊಂದಿದ ಎಲ್ಲ ನಗರಸಭೆ ಸಿಬ್ಬಂದಿಗೆ ಅನುಮತಿ ನೀಡಬೇಕು.

**5. ಅಗತ್ಯ ವಸ್ತುಗಳ ಪೂರೈಕೆ ನಿರ್ವಹಣೆ**

ನಿಯಂತ್ರಿತ ವಲಯವನ್ನು ಸಂಪೂರ್ಣ ಸೀಲ್ ಡೌನ್ ಮಾಡುವುದರಿಂದ, ಈ ಪ್ರದೇಶಗಳ ವ್ಯಾಪ್ತಿಯ ಜನ ಮನೆಗಳಿಂದ ಯಾವ ಕಾರಣಕ್ಕೂ ಹೊರಗೆ ಬರುವಂತಿಲ್ಲ. ಹಾಗಾಗಿ ಜನರಿಗೆ ಮೂಲಭೂತ ಅಗತ್ಯಗಳಾದ ದಿನಸಿ ಪದಾರ್ಥಗಳು, ಮಾಂಸ, ಹಾಲು, ಎಲ್‌ಪಿಜಿ ಅನಿಲ ಮತ್ತು ಔಷಧಗಳನ್ನು ಪೂರೈಸುವವರಿಗೆ ಕೂಡ ಪೊಲೀಸರು ಪ್ರವೇಶಾತಿ ಮತ್ತು ನಿರ್ಗಮನ ಪಾಸ್‌ಗಳನ್ನು ಕೊಡಬೇಕಾಗುತ್ತದೆ. ಆಯಾ ವ್ಯಾಪ್ತಿಯ ಸ್ಥಳೀಯ ಪೊಲೀಸ್ ಠಾಣೆಗಳು ಈ ಸಂಬಂಧ ತುರ್ತು ಪಾಸ್‌ಗಳನ್ನು ಕೊಡಬೇಕು. ಹೀಗೆ ಮಾಡುವ ಮೂಲಕ, ಅತ್ಯಗತ್ಯ ವಸ್ತುಗಳು ಮತ್ತು ಸೇವೆಗಳ ಲಭ್ಯತೆಗೆ ಆ ವ್ಯಾಪ್ತಿಯಲ್ಲಿ ತೊಂದರೆಯಾಗದಂತೆ ನಿಗಾ ವಹಿಸಬೇಕು. ನಿಯಂತ್ರಿತ ವಲಯಗಳ ದಿನಸಿ ಅಂಗಡಿಗಳು, ಮಾಂಸ, ಹಾಲು, ಔಷಧಗಳು, ಎಲ್.ಪಿ.ಜಿ ಅಂಗಡಿಗಳು ಕೂಡ ಮುಚ್ಚಿರುತ್ತವೆ. ಇಂತಹ ಪ್ರದೇಶದಲ್ಲಿರುವ ಪಡಿತರ ಚೀಟಿ ಹೊಂದಿರುವವರಿಗೆ ನ್ಯಾಯಬೆಲೆ ಅಂಗಡಿಗಳು ಪಡಿತರವನ್ನು ಮನೆ ಬಾಗಿಲಿಗೆ ತಲುಪಿಸಲು ಕ್ರಮ ಕೈಗೊಳ್ಳಬೇಕು.

**III. ಗ್ರಾಮೀಣ ಪ್ರದೇಶಗಳಲ್ಲಿ ಪ್ರಮಾಣಿತ ಕಾರ್ಯನಿರ್ವಹಣಾ ಕಾರ್ಯವಿಧಾನ**

**1. ಘಟನಾ ಕಮಾಂಡರ್- ಬಿಕ್ಕಟ್ಟು ನಿರ್ವಹಣಾ ತಂಡ**

ಜಿಲ್ಲಾಧಿಕಾರಿಯವರು ಯಾವುದೇ ಪ್ರದೇಶವನ್ನು ನಿಯಂತ್ರಿತ ವಲಯ ಎಂದು ಘೋಷಣೆ ಮಾಡಿದ ತಕ್ಷಣ, ಅಂತಹ ಪ್ರತಿ ನಿಯಂತ್ರಿತ ವಲಯಕ್ಕೆ ಒಬ್ಬ ಎಕ್ಸಿಕ್ಯೂಟಿವ್ ಮ್ಯಾಜಿಸ್ಟ್ರೇಟ್ ಅವರನ್ನು ಘಟನಾ ಕಮಾಂಡರ್ ಆಗಿ ನೇಮಕ ಮಾಡುತ್ತಾರೆ. ನಿಯಂತ್ರಿತ ವಲಯದ ಹಾಗೂ ಅದನ್ನು ಸುತ್ತುವರಿದ ಮೀಸಲು ಪ್ರದೇಶದ ನಿರ್ವಹಣೆ ಮಾಡುವುದು ಇದರ ಉದ್ದೇಶವಾಗಿರುತ್ತದೆ. ನಿಯಂತ್ರಿತ ವಲಯದ ಸರಹದ್ದನ್ನು ಸ್ಪಷ್ಟವಾಗಿ ಗುರುತಿಸಬೇಕು.

ನಿಯಂತ್ರಿತ ವಲಯದ ಪ್ರದೇಶದೊಳಕ್ಕೆ ಪ್ರವೇಶ ಕಲ್ಪಿಸುವ ಪ್ರಮುಖ ಸ್ಥಳಗಳು ಹಾಗೂ ಅಲ್ಲಿಂದ ಹೊರಹೋಗಲು ಇರುವ ಪ್ರಮುಖ ಸ್ಥಳಗಳನ್ನು ಗುರುತಿಸಬೇಕಾಗುತ್ತದೆ. ಒಂದೊಮ್ಮೆ ಗ್ರಾಮವು ನಿಯಂತ್ರಿತ ವಲಯವಾಗಿದ್ದರೆ, ಇಡೀ ಆ ಗ್ರಾಮದ ವ್ಯಾಪ್ತಿಯನ್ನು ಅಥವಾ ಸೂಕ್ತವೆನಿಸುವ ನಿರ್ಧಾರದ ಪ್ರಕಾರ ಅದಕ್ಕೆ ಹೊಂದಿಕೊಂಡ ಒಂದಷ್ಟು ಪ್ರದೇಶವನ್ನು ಬಿಗಿ ವ್ಯವಸ್ಥೆಯೊಂದಿಗೆ ನಿರ್ಬಂಧಿಸಬೇಕಾಗುತ್ತದೆ.

ನಿಯಂತ್ರಿತ ವಲಯದ ನಿರ್ವಹಣೆಗೆ ಸಂಬಂಧಿಸಿದ ಎಲ್ಲಾ ನಿರ್ಧಾರಗಳು ಘಟನಾ ಕಮಾಂಡರ್ ಅವರ ಜವಾಬ್ದಾರಿಯಾಗಿರುತ್ತದೆ. ಆಯಾ ಜಿಲ್ಲಾಧಿಕಾರಿಯವರ ಮಾರ್ಗದರ್ಶನದಲ್ಲಿ ನಿಯಂತ್ರಿತ ವಲಯದ ಸರಹದ್ದು ನಿರ್ಧರಿಸುವ ಹೊಣೆಗಾರಿಕೆ ಕೂಡ ಇವರದ್ದೇ ಆಗಿರುತ್ತದೆ. ಜಿಲ್ಲಾಧಿಕಾರಿಯವರ ನಿರ್ದೇಶನಕ್ಕೆ ಒಳಪಟ್ಟಂತೆ, ಇಂತಹ ಪ್ರದೇಶದ ದಿನವಹಿ ನಿರ್ವಹಣೆ ಕೂಡ ಘಟನಾ ಕಮಾಂಡರ್ ಅವರ ಅಧಿಕಾರಕ್ಕೆ ಒಳಪಟ್ಟಿರುತ್ತದೆ. ಮೊದಲೇ ಹೇಳಿದಂತೆ, ನಿಯಂತ್ರಿತ ವಲಯದ ಗಡಿಯನ್ನು ಸ್ಪಷ್ಟವಾಗಿ ಗುರುತಿಸಬೇಕಾಗುತ್ತದೆ. ಜೊತೆಗೆ, ನಿಯಂತ್ರಿತ ವಲಯಕ್ಕೆ ಸಂಪರ್ಕ ಕಲ್ಪಿಸುವ ಪ್ರಮುಖ ಸ್ಥಳಗಳು ಹಾಗೂ ಅಲ್ಲಿಂದ ಹೊರ ಊರುಗಳಿಗೆ ಸಂಪರ್ಕ ಕಲ್ಪಿಸುವ ಸ್ಥಳಗಳನ್ನು ಗುರುತಿಸುವುದು ಅಗತ್ಯವಾಗಿರುತ್ತದೆ.

ನಿಯಂತ್ರಿತ ವಲಯ ಎಂದು ಘೋಷಿತವಾದ ಪ್ರದೇಶಕ್ಕೆ ಹತ್ತಿರದ ಸ್ಥಳದಲ್ಲಿ ಘಟನಾ ನಿಯಂತ್ರಣ ಕೇಂದ್ರವನ್ನು ಸ್ಥಾಪಿಸಬೇಕಾಗುತ್ತದೆ. ಘಟನಾ ಕಮಾಂಡರ್ ಆಗಿ ನೇಮಕಗೊಂಡವರು ಈ ಕೇಂದ್ರಗಳಿಂದ ಕಾರ್ಯನಿರ್ವಹಿಸಲಿದ್ದಾರೆ. ಈ ಕೇಂದ್ರವು ಒಂದು ಕೇಂದ್ರೀಕೃತ ನಿಯಂತ್ರಣ ಕೊಠಡಿಯನ್ನು ಹೊಂದಿರುತ್ತದೆ. ಘಟನಾ ಕಮಾಂಡರ್ ಅವರೇ ಇದರ ಮೇಲ್ವಿಚಾರಕರಾಗಿರುತ್ತಾರೆ. ಪೊಲೀಸ್, ಪಂಚಾಯತಿ ಮತ್ತು ಆರೋಗ್ಯ ಇಲಾಖೆ ಪ್ರತಿನಿಧಿಗಳನ್ನು ಇಲ್ಲಿಗೆ ನಿಯೋಜಿಸಲಾಗುತ್ತದೆ. ಘಟನಾ ಕಮಾಂಡರ್ ಅವರಿಗೆ ಈ ಸುತ್ತೋಲೆಯ ಪ್ರಕಾರ ಕಾರ್ಯನಿರ್ವಹಿಸಲು ಅನುವು ಮಾಡಿಕೊಡುವ ನಿಟ್ಟಿನಲ್ಲಿ ಸ್ಥಳೀಯ ಪಂಚಾಯತಿ ಅಧಿಕಾರಿಗಳು ಎಲ್ಲಾ ರೀತಿಯ ಸಹಕಾರವನ್ನು ನೀಡಬೇಕು.

**2. ಸಂಪೂರ್ಣ ಸೀಲ್ ಡೌನ್- ಪೊಲೀಸರ ಪಾತ್ರ**

ಜನವಸತಿ ಪ್ರದೇಶವನ್ನು ನಿಯಂತ್ರಿತ ವಲಯ ಎಂದು ಘೋಷಿಸಿದರೆ ಆ ಪ್ರದೇಶದ ಯಾವುದೇ ವ್ಯಕ್ತಿ ಯಾವುದೇ ಕಾರಣಕ್ಕೂ ಹೊರಗೆ ಬರುವಂತಿಲ್ಲ. ಇಡೀ ಜನವಸತಿ ಪ್ರದೇಶದ ಎಲ್ಲಾ ಪ್ರವೇಶ ಸ್ಥಳಗಳನ್ನು ಪೊಲೀಸರು ಕಾಯಂ ಬ್ಯಾರಿಕೇಡ್‌ಗಳಿಂದ ಬಿಗಿಗೊಳಿಸಬೇಕಾಗುತ್ತದೆ. ಅಂತಹ ಇಡೀ ಜನವಸತಿ ಪ್ರದೇಶಕ್ಕೆ ಕೇವಲ ಒಂದೇ ಒಂದು ಪ್ರವೇಶ ಮತ್ತು ನಿರ್ಗಮನ ಸ್ಥಳವನ್ನು ಮತ್ತು ಹೊರ ಹೋಗುವ ಸ್ಥಳವನ್ನು ನಿಗದಿಗೊಳಿಸಲಾಗುತ್ತದೆ. ಅಂತಹ ನಿಯಂತ್ರಿತ ವಲಯ ದ ಒಳಕ್ಕೆ ಅಥವಾ ಅಲ್ಲಿಂದ ಹೊರಕ್ಕೆ ಯಾವುದೇ ವಾಹನ ಸಂಚಾರಕ್ಕೆ ಅವಕಾಶ ಇರುವುದಿಲ್ಲ. ಅಂತಹ ಪ್ರದೇಶವು ಸಂಪೂರ್ಣ ಸೀಲ್ ಡೌನ್ ಆಗುವಂತೆ ಮಾಡುವುದು ಪೊಲೀಸರ ಹೊಣೆಗಾರಿಕೆ ಆಗಿರುತ್ತದೆ.

**3. ಆರೋಗ್ಯ ಇಲಾಖೆ- ಜವಾಬ್ದಾರಿಗಳು**

ನಿಯಂತ್ರಿತ ವಲಯದಲ್ಲಿ ವಿಚಕ್ಷಣೆ ಮತ್ತು ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳುವುದು ಜಿಲ್ಲಾ ಆರೋಗ್ಯ ಅಧಿಕಾರಿಗಳ ಜವಾಬ್ದಾರಿಯಾಗಿರುತ್ತದೆ. ಅಂತಹ ವಲಯದಲ್ಲಿ ಒಂದು ಆರೋಗ್ಯ ಹೊರಠಾಣೆ ಸ್ಥಾಪಿಸಬೇಕಾಗುತ್ತದೆ. ಈ ಹೊರಠಾಣೆಯಲ್ಲಿ ಒಬ್ಬ ವೈದ್ಯರು ಮತ್ತು ಸಾಕಷ್ಟು ಕ್ಷೇತ್ರ ಸಿಬ್ಬಂದಿ ಇರಬೇಕು. ಪ್ರತಿದಿನ ಕಟ್ಟುನಿಟ್ಟಾಗಿ ಐಇಸಿ

ಪ್ರಚಾರದ ಜೊತೆಗೆ ದಿನಕ್ಕೆ ಎರಡು ಸಲ ಸೋಂಕು ಸಂಪರ್ಕಿತರ ಜಾಡು ಹಿಡಿಯುವ ಕಾರ್ಯವನ್ನು ಈ ಸಿಬ್ಬಂದಿ ನಿರ್ವಹಿಸಬೇಕು.

ಸಂಪರ್ಕಿತರನ್ನು ಪತ್ತೆ ಮಾಡುವ ಕಾರ್ಯ ಕೈಗೆತ್ತಿಕೊಳ್ಳುವ ಅಗತ್ಯವಿದೆ. ಹೆಚ್ಚಿನ ಅಪಾಯದಲ್ಲಿರುವ (ಹೈ ರಿಸ್ಕ್ ಪ್ರಾಥಮಿಕ) ಸಂಪರ್ಕಿತರನ್ನು ಸಾಂಸ್ಥಿಕ ದಿಗ್ಬಂಧನಕ್ಕೆ ಹಾಗೂ ಕಡಿಮೆ ಅಪಾಯದಲ್ಲಿರುವ (ದ್ವಿತೀಯಕ ಹಂತದ-ಲೋ ರಿಸ್ಕ್ ಸೆಕೆಂಡರಿ) ಸಂಪರ್ಕಿತರನ್ನು ಗೃಹ ದಿಗ್ಬಂಧನಕ್ಕೆ ತಕ್ಷಣವೇ ಒಳಪಡಿಸುವ ಕಾರ್ಯ ಆಗಬೇಕಾಗಿದೆ. ಇದೇ ವೇಳೆ, ಕೊಳೆಗೇರಿ ಪ್ರದೇಶಗಳಲ್ಲಿ ಸ್ಥಳಾಭಾವದ ಕಾರಣದಿಂದಾಗಿ ಕಡಿಮೆ ಅಪಾಯದಲ್ಲಿ ಇರುವವರಿಗೆ ಕೂಡ ಪರಿಣಾಮಕಾರಿಯಾಗಿ ಹೋಮ್ ಕ್ವಾರಂಟೈನ್ ಅನುಸರಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ, ಕೊಳೆಗೇರಿ ಪ್ರದೇಶಗಳ ಅಂತಹ ಸಂಪರ್ಕಿತರನ್ನು ಕೂಡ ಸಾಂಸ್ಥಿಕ ದಿಗ್ಬಂಧನಕ್ಕೆ ಸ್ಥಳಾಂತರಿಸಬೇಕಾಗುತ್ತದೆ.

ಅಧಿಕ ಅಪಾಯದಲ್ಲಿರುವ ಮತ್ತು ಕಡಿಮೆ ಅಪಾಯದಲ್ಲಿರುವ ಸಂಪರ್ಕಿತರನ್ನು ಪರೀಕ್ಷೆಗೆ ಒಳಪಡಿಸುವ ಜವಾಬ್ದಾರಿ ಆರೋಗ್ಯ ತಂಡಗಳದ್ದಾಗಿರುತ್ತದೆ. ನಿಗದಿತ ಶಿಷ್ಟಾಚಾರದ ಪ್ರಕಾರ ಗಂಟಲ ದ್ರವ ಮಾದರಿಗಳನ್ನು ಸಂಗ್ರಹಿಸಿ ಇದನ್ನು ಮಾಡಬೇಕಾಗುತ್ತದೆ. ಬಿಬಿಎಂಪಿ ಆಯುಕ್ತರು/ಆಯಾ ಜಿಲ್ಲಾಧಿಕಾರಿಯವರು ಯಾವಾಗ ಸೂಕ್ತ ಎಂದು ನಿರ್ಧರಿಸುತ್ತಾರೋ ಆಗ ರಾಪಿಡ್ ಆ್ಯಂಟಿಬಾಡಿ ಪರೀಕ್ಷೆಗಳನ್ನು ಮಾಡುವ ಮೂಲಕ ಸಮುದಾಯ ಮಟ್ಟದ ಹರಡುವಿಕೆಯನ್ನು ತಡೆಯಲು ಜರೂರು ಕ್ರಮ ಕೈಗೊಳ್ಳಬೇಕಾಗುತ್ತದೆ. ಉರಿಶೀತ ಜ್ವರದಂತಹ ಸೋಂಕುಗಳು (ಐಎಲ್ ಐ ಗಳು) ಅಥವಾ ಗಂಭೀರವಾದ ತೀವ್ರ ಉಸಿರಾಟ ಸೋಂಕು (ಎಸ್ ಎ ಆರ್ ಐ) ಪ್ರಕರಣಗಳನ್ನು ಅಥವಾ ಕೋವಿಡ್-19 ಅನ್ನು ಹೋಲುವ ಯಾವುದೇ ಗುಣಲಕ್ಷಣಗಳನ್ನು ಪತ್ತೆ ಹಚ್ಚುವ ಸಲುವಾಗಿ ಇಡೀ ಪ್ರದೇಶದ ಎಲ್ಲಾ ಜನರ ಹೆಲ್ತ್ ಪ್ರೊಫೈಲಿಂಗ್ (ಆರೋಗ್ಯ ವಿವರ ಪಟ್ಟಿ) ಹಾಗೂ ಅವರಿಗೆ ಚಿಕಿತ್ಸೆ ನೀಡುವ ಕಾರ್ಯವನ್ನು ಆದ್ಯತೆಯ ಕಾರ್ಯವಾಗಿ ಕೈಗೆತ್ತಿಕೊಳ್ಳಬೇಕಾಗುತ್ತದೆ. ಘಟನಾ ಕಮಾಂಡರ್ ಅವರ ಮಾರ್ಗದರ್ಶನದಲ್ಲಿ ಇಂತಹ ಪ್ರದೇಶದಲ್ಲಿ ಅತ್ಯಂತ ಕಟ್ಟುನಿಟ್ಟಾಗಿ ಸಾಮಾಜಿಕ ಅಂತರ ಕಾಪಾಡಲು ಜನರಿಗೆ ಸಲಹೆ ನೀಡಬೇಕಾಗುತ್ತದೆ. ಆರೋಗ್ಯ ಇಲಾಖೆಯು ದಿಗ್ಬಂಧನದಲ್ಲಿರುವವರಿಗೆ ಮುಖಗವಸು ಮತ್ತು ಇತರ ವಸ್ತುಗಳನ್ನು ಒದಗಿಸುತ್ತದೆ.

**4) ಗ್ರಾಮ ಪಂಚಾಯಿತಿಗಳ ಜವಾಬ್ದಾರಿ**

ನಿಯಂತ್ರಿತ ವಲಯಗಳಲ್ಲಿ ಸಮಗ್ರ ಸ್ವಚ್ಛತೆ ಕಾಪಾಡುವುದು ಗ್ರಾಮ ಪಂಚಾಯಿತಿ ಅಧಿಕಾರಿಗಳ ಜವಾಬ್ದಾರಿಯಾಗಿರುತ್ತದೆ. ನಿಯಂತ್ರಿತ ವಲಯಗಳಲ್ಲಿ ಘನ ತ್ಯಾಜ್ಯ ನಿರ್ವಹಣೆ ಮತ್ತು ಸೋಂಕು ನಿವಾರಕಗಳ ಸಿಂಪಡಣೆಯನ್ನು ಪ್ರತಿದಿನವೂ ಕೈಗೊಳ್ಳಬೇಕು. ಒಂದೊಮ್ಮೆ ನೀರಿನ ಪೂರೈಕೆಯಲ್ಲಿ ವ್ಯತ್ಯಯವಾದರೆ ಶುದ್ಧವಾದ ಕುಡಿಯುವ ನೀರು ಪೂರೈಸುವುದು ಅಗತ್ಯ. ಅಗತ್ಯಬಿದ್ದರೆ ಮನೆಮನೆಗೂ ಕುಡಿಯುವ ನೀರನ್ನು ಪೂರೈಕೆ ಮಾಡಬೇಕು. ಈ ಮೇಲಿನ ಕಾರ್ಯಗಳಿಗೆ ನಿಯಂತ್ರಿತ ವಲಯದ ಪ್ರತಿ ಪಂಚಾಯಿತಿ ಸಿಬ್ಬಂದಿ ಸರ್ಕಾರದ ದೃಢೀಕೃತ ಗುರುತುಪತ್ರವನ್ನು ಹೊಂದಿರಬೇಕು. ಆಡಳಿತ ಕೇಂದ್ರದ ಕಾರ್ಯ ಸುಗಮವಾಗಿ ಸಾಗಲು ಗ್ರಾಮ ಪಂಚಾಯಿತಿಗಳು ಎಲ್ಲ ಸೌಲಭ್ಯವನ್ನೂ ಒದಗಿಸಬೇಕು.

**5) ಅಗತ್ಯ ವಸ್ತುಗಳ ಪೂರೈಕೆಯ ನಿರ್ವಹಣೆ**

ನಿಯಂತ್ರಿತ ವಲಯವನ್ನು ಸಂಪೂರ್ಣವಾಗಿ ಸೀಲ್ ಮಾಡುವುದರಿಂದ ದಿನಸಿ, ಮಾಂಸ, ಹಾಲು, ಔಷಧ ಸೇರಿದಂತೆ ಯಾವುದೇ ಮೂಲ ಅಗತ್ಯಗಳಿಗೂ ಜನರು ಮನೆಯಿಂದ ಹೊರಬರುವಂತಿಲ್ಲ. ಈ

ಹಿನ್ನೆಲೆಯಲ್ಲಿ ನಿಯಂತ್ರಿತ ವಲಯದೊಳಗೆ ಅಗತ್ಯ ವಸ್ತು ಹಾಗೂ ಸೇವೆಗಳನ್ನು ಒದಗಿಸುವವರಿಗೆ ಪೊಲೀಸರು ಪ್ರವೇಶ ಹಾಗೂ ನಿರ್ಗಮನ ಪಾಸ್ ಗಳನ್ನು ಒದಗಿಸಬೇಕು. ಹಾಟ್-ಸ್ಪಾಟ್ ವಲಯದಲ್ಲಿ ಮೂಲ ಸೌಕರ್ಯ ಒದಗಿಸುವ ದಿನಸಿ, ಮಾಂಸ, ಔಷಧ ಅಂಗಡಿಗಳನ್ನು ಕೂಡ ಮುಚ್ಚಬೇಕು. ರೇಷನ್ ಕಾರ್ಡ್ ದಾರರಿಗೆ ನ್ಯಾಯ ಬೆಲೆ ಅಂಗಡಿಗಳಿಂದ ರೇಷನ್ ಅನ್ನು ಮನೆ ಬಾಗಿಲಿಗೆ ತಲುಪಿಸುವ ವ್ಯವಸ್ಥೆ ಮಾಡಬೇಕು.

ಆದಾಗ್ಯೂ, ಕೃಷಿ ಚಟುವಟಿಕೆ ಮತ್ತು ಕಾರ್ಯಗಳಿಗೆ ಅನುವು ಮಾಡಿಕೊಡಬೇಕು. ನಿಯಂತ್ರಿತ ವಲಯದ ಆರೋಗ್ಯವಂತ ವ್ಯಕ್ತಿಗಳು ಸಾಮಾಜಿಕ ಅಂತರ ಕಾಯ್ದುಕೊಂಡು, ಕಡ್ಡಾಯವಾಗಿ ಮುಖಕ್ಕೆ ರಕ್ಷಣಾ ಮಾಸ್ಕ್ ಧರಿಸಿ ಕೃಷಿ ಕಾರ್ಯದಲ್ಲಿ ತೊಡಗಬಹುದು.

**IV.ಬಫರ್ ಝೋನ್ ನಿರ್ವಹಣೆ:**

1) ನಿಯಂತ್ರಿತ ವಲಯಕ್ಕಾಗಿ ಘಟನಾ ಕಮಾಂಡರ್ ನೇಮಕ ಮಾಡಿ, ಬಫರ್ ವಲಯವನ್ನು ನಿರ್ವಹಿಸುವ ಜವಾಬ್ದಾರಿಯನ್ನು ಅವರಿಗೆ ವಹಿಸಬಹುದು. ಅವರೂ ಮೇಲ್ಕಂಡ ವ್ಯವಸ್ಥೆಯನ್ನು ಮೇಲ್ವಿಚಾರಣೆಗೆ ಬಳಕೆ ಮಾಡಬಹುದು.
2) ಅರೆ ಲಾಕ್-ಡೌನ್: ಪೊಲೀಸರ ಪಾತ್ರ: ನಿಯಂತ್ರಿತ ವಲಯದ ಸುತ್ತಮುತ್ತ ಸಾಮಾಜಿಕ ಅಂತರ ನಿಯಂತ್ರಿಸುವ ಜೊತೆಗೆ, ನಾಗರಿಕರ ನಿರ್ಬಂಧಿತ ಸಂಚಾರವನ್ನು ಪೊಲೀಸರು ಖಾತ್ರಿಪಡಿಸಬೇಕು. ಸಾರ್ವಜನಿಕ ಸಮಾರಂಭ, ಜನ ಸೇರುವುದಕ್ಕೆ ಅನುಮತಿ ನೀಡಬಾರದು.
3) **ಆರೋಗ್ಯ ಇಲಾಖೆ:**

ಎ) ಐಎಲ್ಐ ಮತ್ತು ಎಸ್ಎಆರ್ಐ ಪ್ರಕರಣಗಳನ್ನು ಗುರುತಿಸಲು ಆರೋಗ್ಯ ಸಿಬ್ಬಂದಿ ಚುರುಕಾಗಿ ಹಾಗೂ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಬೇಕು. ಮತ್ತು ಅಂಥವರನ್ನು ಗುರುತಿಸಿ ಜ್ವರ ಕ್ಲಿನಿಕ್ ಅಥವಾ ಪ್ರತ್ಯೇಕ ನಿಗಾ ಆಸ್ಪತ್ರೆಗಳಿಗೆ ಕಳುಹಿಸುವುದು.

ಬಿ) ಪ್ರತಿ ಕಣ್ಗಾವಲು ತಂಡವೂ ಪ್ರತಿದಿನ 50 ಮನೆಗಳ ತಪಾಸಣೆ ಕೆಲಸ ಮಾಡಬೇಕು ಮತ್ತು ದಿನದಲ್ಲಿ ಎಲ್ಲ ಮನೆಗಳ ಆರೋಗ್ಯ ಸ್ಥಿತಿಗತಿಯ ಮಾಹಿತಿ ಪಡೆದುಕೊಳ್ಳಬೇಕು.

ಸಿ) ಸಾರ್ವಜನಿಕ ಸ್ಥಳದಲ್ಲಿ ಸಾಮಾಜಿಕ ಅಂತರ ಹಾಗೂ ಮಾಸ್ಕ್ ಬಳಕೆಯನ್ನು ಜಾರಿಗೊಳಿಸುವುದು. ತಂಡಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಬಿಬಿಎಂಪಿ / ಉಪ ಆಯುಕ್ತರು ಸೂಕ್ತ ರಕ್ಷಣಾ ಸಲಕರಣೆಗಳಾದ ಗ್ಲೌಸ್, ಮಾಸ್ಕ್, ಸ್ಯಾನಿಟೈಸರ್ ಮತ್ತು ಪಿಪಿಇಗಳನ್ನು (ಎಚ್.ಎಫ್.ಡಬ್ಲ್ಯು ಮಾರ್ಗಸೂಚಿಗಳ ಪ್ರಕಾರ ಪಿಪಿಇಗಳು ಅಗತ್ಯವಿದ್ದರೆ) ಒದಗಿಸಬೇಕು.

(ಟಿ.ಎಂ. ವಿಜಯ ಭಾಸ್ಕರ್)
**ಸರ್ಕಾರದ ಮುಖ್ಯ ಕಾರ್ಯದರ್ಶಿ**

ಇವರಿಗೆ :

1. ಆಯುಕ್ತರು, ಬಿಬಿಎಂಪಿ
2. ಎಲ್ಲಾ ಜಿಲ್ಲಾಧಿಕಾರಿಗಳು
3. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆ
4. ಅಭಿಯಾನ ನಿರ್ದೇಶಕರು, ಎನ್ಎಚ್ಎಂ
5. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆ
6. ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ